ಹೊತ್ತುಮೀರಿಯು ಸಾಧನೆಗೆಯ್ವ ದೊರೆಗಳ
ಒತ್ತಿನೊಳಿಗದವರರಿದು
ಚಿತ್ರೈಸಿ ನಿಮಗಂಜಿ ರವಿಯೋಡಿ ಗಗನವ
ಹತ್ತಿದನೆಂದು ತೋರಿದರು ॥ ೫ ॥

ಸಾಕು ಹೋ ಹೊತ್ತಾದುದೆಂದೆಡ ಬಲ ಜಾರಿ
ಯಾಕುವರರು ಮೆಯ್ಯಮುರಿದು
ನಾಕಲಂಘಿಸಿ ಕೋಲುಕೋಲನೊಂದಿಸಿ ಜಿನ
ಗೇಕಚಿತ್ತದೊಳಿರಗಿದರು ॥ ೬ ॥

ಬನದ ತಣ್ಣೆಳಲ ತಂಗಾಳಿಯೊಳೊಪ್ಪಚ್ಚಿ
ತನುವನೊರಗಿ ಸಿದ್ದೆಗೆಯ್ದು
ಜಿನಸಿದ್ಧ ಗುರುವೆ ನಿರಂಜನಸಿದ್ಧಯೆಂ
ದೆನುತೆದ್ದರವರು ಜೋಕೆಯೊಳು ॥ ೭ ॥

ವೀಳೆಯಗೊಳುತ ಕನ್ನಡಿಯ ನೋಡುತ ತೆಳು
ಗಾಳಿಗೆ ಮೈಯನೊಪ್ಪಿಸುತ
ಮೇಲೊಯ್ಯನೊಯ್ಯನೆ ತಮ್ಮೊಳು ಸಂಗೀತ
ಕೇಳಿಗವರು ತೊಡಗಿದರು ॥ ೮ ॥

ದನಿಯಿಂಪು ರಾಗದ ಸೊಂಪು ತಾನದ ನುಂಪು
ಅನುವೆತ್ತ ಪದಗಳ ವ್ಯಕ್ತಿ
ನೆನೆಯ ಬಾರದು ಪಾಡಬಾರದಿನ್ನೊಬ್ಬರಿ
ಗೆನಿಸಿ ಪಾಡಿದರು ಗಾಡಿಯೊಳು ॥ ೯ ॥

ವ್ಯಾಕರಣದೊಳೊಮ್ಮೆ ತರ್ಕಶಾಸ್ತ್ರದೊಳೊಮ್ಮೆ
ಬೇಕಾದ ನ್ಯಾಸ ಭಾಷೆಯೊಳು
ಪ್ರಾಕೃತ ಗೀರ್ವಾಣ ದೇಶೀಯ ಭಾಷೆಯೊ
ಳಾ ಕುಶಲರು ವಚಿಸಿದರು ॥ ೧೦ ॥

ನುಡಿದುದೆಲ್ಲಾಗಮ ಭರತಪುತ್ರರು ತುಟಿ
ಮಿಡುಕಿದುದೆಲ್ಲ ಚಿತ್ರಾರ್ಥ
ತೊಡಗಿದುದೆಲ್ಲ ಪುರಾಣ ಕಾವ್ಯದ ಪಾಲು
ಗಡಲೆಂದರೇನ ಬಣ್ಣಿಪೆನು ॥ ೧೧ ॥

ಹಸ್ತಿನ ಪುರಪತಿ ಮೇಘೇಶ್ವರನು ಪ್ರ
ಶಸ್ತ ದೀಕ್ಷೆಯನಾಂತನೆಂದು
ಪ್ರಸ್ತುತವಾರ್ತೆಯು ಸಾಹಿತ್ಯಗೋಷ್ಠಿಯ
ಪ್ರಸ್ತಾಪದೊಳು ಬಂದುದವರ್ಗೆ ॥ ೧೨ ॥

ಇಂತೆಂಬ ಸುದ್ದಿಯ ಕೇಳ್ದವರೆಲ್ಲರೋ
ರಂತೆ ವಿಸ್ಮಯಚಿತ್ತರಾಗಿ
ಮುಂತೆ ಮೂಗಿನಮೇಲೆ ಬೆರಳಿಟ್ಟು ಜಿನ ಜಿನ
ನೋಂತರೆಂದೊಲೆದರು ಶಿರವ ॥ ೧೩ ॥

ಪ್ರಾಯ ತಗ್ಗದ ಮುನ್ನ ಕಾಯ ಜಗ್ಗದ ಮುನ್ನ
ಸ್ತ್ರೀಯರು ಮಕ್ಕಳೆಂದೆಂಬ
ಮಾಯೆ ಮುತ್ತದ ಮುನ್ನ ಯೆಚ್ಚರ ಬೇಕೆಂದು
ಪಾಯವ ನೋಡಿದರವರು ॥ ೧೪ ॥

ಕಣ್ಣರಿದಪ್ಪಾಜಿ ನಮಗೆಯಿನ್ನೊಂದೊಂದು
ಹೆಣ್ಣ ಸಂಬಂಧ ಮಾಡುವನು
ಹೆಣ್ಣಿಗೆ ಸಿಕ್ಕಿ ಬಾಳುವ ಬಾಳು ನೊಣ ಹಾರಿ
ಯೆಣ್ಣೆಯೊಳಗೆ ಬಿದ್ದ ರೀತಿ ॥ ೧೫ ॥

ಹೆಣ್ಣ ಹಿಡಿದಮೇಲೆ ಹೊನ್ನ ಹಿಡಿಯಬೇಕು
ಮಣ್ಣ ಹಿಡಿಯಬೇಕು ಸಹಜ
ಹೆಣ್ಣು ಹೊನ್ನು ಮಣ್ಣು ವಿಡಿದಾತ್ಮರೆಲ್ಲರು
ಮಣ್ಣುವಿಡಿದ ಲೋಹದಂತೆ ॥ ೧೬ ॥

ಸಿರಿಯಿದ್ದು ತೋರೆವುದು ಹೆಚ್ಚು ಜೌವನದಲ್ಲಿ
ವರದೀಕ್ಷೆವಡೆವುದು ಹೆಚ್ಚು
ಪರಮಾತ್ಮತತ್ವವನರಿವುದು ಹೆಚ್ಚಿವು
ದೊರೆಕೊಂಡರೆಮಗರಿದುಂಟೆ || ೧೭ ||

ಕುಲ ಬಲ ಸಿರಿ ಸೊಬಗಿದ್ದರೆಲ್ಲವ ಬಿಟ್ಟು
ಗೆಲವಾಂತು ತಪಸು ಮಾಡಿದರೆ
ಚೆಲುವೆ ಪತಿವ್ರತೆಯಾದಂತೆ ಹೆಚ್ಚಿನ
ಫಲವಹುದೆಂದೆಣಿಸಿದರು || ೧೮ ||

ಕೈಲಾಸಗಿರಿಗೆ ಹೋಗುವವಲ್ಲಿ ಮಂದರ
ಶೈಲದಂತೆಸೆವಾದಿಜಿನನ
ಕೈಲೇಸಿನಿಂದ ದೀಕ್ಷೆಯ ಕೊಂಬವೆನುತಾಗ
ವೈಲಾಗಿನಿಂದೆದ್ದರವರು || ೧೯ ||

ಅಪ್ಪಾಜಿಗರುಹಿ ದೀಕ್ಷೆಯ ಕಳುಹಿಸಿಕೊಂಡು
ಬಪ್ಪೆವೆಂದರು ಕೆಲರಲ್ಲಿ
ಅಪ್ಪಾಜಿಯರಿದರೆ ನಮ್ಮ ದೀಕ್ಷೆಯ ಕಾರ್ಯ
ತಪ್ಪುವುದೆಂದರು ಕೆಲರು || ೨೦ ||

ಅಪ್ಪಾಜಿಯರನೊಮ್ಮೆ ಭಾವಿಸಿ ಬೀಳ್ಕೊಡ
ಲಪ್ಪುದೆಮ್ಮಯ ತಾಯಿಗಳನು
ಒಪ್ಪುಗೊಳಿಸಲರಿದವರರಿದರೆ ಕಾರ್ಯ
ತಪ್ಪುವುದೆಂದರು ಕೆಲರು || ೨೧ ||

ಒಡವೆಯನೊಪ್ಪಿಸಬೇಕೊ ಮಕ್ಕಳ ಕೈಯ
ಲೆಡೆಗೊಟ್ಟು ಬರಬೇಕೊ ನಮ್ಮ
ಮಡದಿಯರನು ತೋರಿ ಸಲಹೆಂದು ಬರಬೇಕೊ
ತೊಡಕೇನು ನಮಗೈಯ್ಯನೊಡನೆ || ೨೨ ||

ಅವರ ಹಂಗೆಮಗಿಲ್ಲ ನಮ್ಮ ಹಂಗವರ್ಗಿಲ್ಲ
ಅವರಿಗವರು ನಾವು ನಮಗೆ
ಭವಮಾಲೆಯೊಳು ನೋಡಲಾರಿಗಾರುಂಟೆಂದು
ತವತಪಗೆಲ್ಲರಾಡಿದರು ॥ ೨೩ ॥

ಮಗನಯ್ಯನಾಗುವನಯ್ಯನಾ ಮಗನಿಗೆ
ಮಗನಹನೊಂದು ಜನ್ಮದೊಳು
ಮಗಳು ತಾಯಾಗುವಳಾ ತಾಯಿ ಮಗಳಿಗೆ
ಮಗಳಹಳೊಂದು ಜನ್ಮದೊಳು ॥ ೨೪ ॥

ತಾಯುದರದಿ ತಂದ ತನು ನಮಗೆರವಿನ್ನು
ತಾಯಿ ತಂದೆಗಳ ಮಾತೇನು
ನ್ಯಾಯವಿದೇಳಿ ದೀಕ್ಷೆಗೆ ನಮೋ ಹಂಸನಾ
ಥಾಯುಯೆಂದೊಡನೆದ್ದರವರು ॥ ೨೫ ॥

ಬೆಳುಮುಗಿಲೊಡ್ಡಿ ಬೇರೂರಿ ಭೂಮಿಯೊಳುಬ್ಬಿ
ಬೆಳೆದು ಬೆಳ್ವೆಟ್ಟವಾದಂತೆ
ತಳತಳಿಸುವ ಬೆಳುವೆಳಗಿಂದ ರಜತಾದ್ರಿ
ಹೊಳೆದುದಾ ಕುವರರ ಮುಂದೆ ॥ ೨೬ ॥

ಅಂಚೆಗಳಿಂಗಡಲೊಳು ಹರಿವಂತೆಳೆ
ಮಿಂಚೇರುವಂತೆ ಬೆಳ್ಮುಗಿಲ
ಹಿಂಚು ಮುಂಚಾಗದೆ ತಮ್ಮೊಳೊರ್ವರು ಹರಿ
ಹಂಚಾಗದೇರಿದರವರು ॥ ೨೭ ॥

ಬರುತಿರ್ದರೊಯ್ಯನೊಯ್ಯನೆ ಬಪ್ಪ ಪಥದೊಳಾ
ಗಿರಿಯಗ್ರಜಿನಸಭೆಯಿಂದ
ಸುರಭೇರಿ ದಂಧಣ ದಿಮ್ಮ ಭೋಭೋರೆಂಬ
ಸ್ವರ ಕೇಳಲಾಯ್ತು ದೂರದೊಳು ॥ ೨೮ ॥

ಭೇರಿಯ ದನಿಗೇಳಿ ನಲಿದರು ನವಿಲು
ಮುಂಗಾರ ಮೊಳಗುಗೇಳಿದಂತೆ
ಆ ರಾಜಪುತ್ರರು ಕಟ್ಟೆದಿರೊಳಗೆ ಕ
ಣ್ಣಾರೆ ಕಂಡರು ಜಿನಸಭೆಯ || ೨೯ ||

ಬೆಳ್ಳಿಯ ಬೆಟ್ಟದಮೇಲೊಂದು ಕಾಮನ
ಬಿಲ್ಲಿನ ಬೆಟ್ಟ ನಿಂದಿದೆಕೊ
ಬೆಳ್ಳಿಬೆಟ್ಟವ ಮುಟ್ಟದಿದೆ ಚಿತ್ರವೆಂ
ದೆಲ್ಲರು ನೋಡುತೆಯ್ದಿದರು || ೩೦ ||

ಬೆಳಗಿನ ಕಡಲೊಳು ನಡೆವಂತೆ ತಂಪಿನ
ಹೊಳೆಯೊಳು ಮುಳುಗಿ ಬಹಂತೆ
ತಳತಳಿಸುತ ಗಮಗಮಿಸುವ ಭೂಮಿಯೊ
ಳೊಳಹೊಕ್ಕು ಗಮಿಸಿದರೊಸೆದು || ೩೧ ||

ನಿಮಿಷದೊಳಗೆ ಮಿಂದು ಕೂಡೆ ಸಿಂಗರಿಸಿಯು
ತ್ತಮವಸ್ತುಚಯವ ಸಂಗ್ರಹಿಸಿ
ಅಮರೇಂದ್ರನನುಮತದಿಂದ ಸ್ವಾಮಿಯ ಪೂಜೆ
ಗಮಲಚಿತ್ತರು ತೊಡಗಿದರು || ೩೨ ||

ಮೋಕ್ಷಕೆ ಕಾರಣ ಧ್ಯಾನವದಕೆ ಬಾಹ್ಯ
ರಕ್ಷೆಯಲ್ಲವೆ ಜಿನದೀಕ್ಷೆ
ದೀಕ್ಷಾಂ ದೇಹಿಯೆಂದೆಲ್ಲರು ಸಾಷ್ಟಾಂಗ
ಲಕ್ಷಿತವೆನಲೆರಗಿದರು || ೩೩ ||

ಮುಗಿದು ನೀಡಿದ ತೋಳು ನಿಮಿರಿ ಪಾಸಿದ ಕಾಲು
ಮಿಗೆ ಭೂಮಿ ಮುಟ್ಟಿದ ನೊಸಲು
ಜಗದೀಶನಿದಿರೊಳಿದ್ದರು ಮಿಸುಕದೆ ಹೊನ್ನ
ಹೊಗರ ಪುತ್ತಳಿಗಳೆಂಬಂತೆ || ೩೪ ||

ಅಸ್ತು ಭವ್ಯಾಸ್ಸಮುತ್ತಿಷ್ಠತಯೆಂದಾದಿ
ವಸ್ತು ನಿರೂಪಿಸಲೊಡನೆ
ಮಸ್ತಕವೆತ್ತಿ ನಿಂದರು ಕೆಲಬಲದ ಸು
ರಸ್ತೋಮ ಜಯಜಯಯೆನಲು ॥ ೩೫ ॥

ಹೊದೆದ ದುಕೂಲವ ಬಿಸುಟರು ತೆಗೆದರು
ಪದಕವ ಕಳೆದರು ಉಳಿಯ
ಒದೆದಾಡುತಿಹ ಕರ್ಣದಾಭರಣಗಳ ಶಾಂ
ತದೊಳು ಸಡಿಲಿಸಿ ಹಾಕಿದರು ॥ ೩೬ ॥

ಕೇಶಪಾಶವ ಪರಿದಿಟ್ಟರು ದುರ್ಮೋಹ
ಪಾಶವ ಪರಿದಿಡುವಂತೆ
ಆಶಾಪಾಶವ ಪರಿವಂತೆ ಮಾಯಾ
ಪಾಶವ ಪರಿದಿಡುವಂತೆ ॥ ೩೭ ॥

ಸ್ವಸ್ತಿಕದಿಂದೆಲ್ಲರೆದ್ದು ನಡೆದರಾದಿ
ವಸ್ತುವಿನಂಘ್ರಿಯುಗಲಕೆ
ಮಸ್ತಕವಿಟ್ಟೆರಗಿದರಾತ್ಮಸಿದ್ಧಿರೇ
ವಾಸ್ತುಯೆಂದನು ವೀತರಾಗ ॥ ೩೮ ॥

ಕರೆದರಾಗಳೆ ಸುರರಾಕಾಶದೊಳು ನಿಂದು
ನರುಗಂಪ ಕರೆವ ಪೂಮಳೆಯು
ತುರುಗಿ ಸೂಳೈಸಿದುವೆಲ್ಲ ವಾದ್ಯಗಳು ಲೇ
ಸರಿದು ಮಂಗಲವ ಪಾಡಿದರು ॥ ೩೯ ॥

ಮುಪ್ಪಾದ ಮೀಸೆಗೆ ಕಪ್ಪನಿಟ್ಟಾದರು
ಚಪ್ಪರಿದಾಡುವರುಂಟು
ತುಪ್ಪುಳುಮೀಸೆಯೊಳಗೆ ತೊರೆದತಿಥಿಗ
ಳಪ್ಪವರಾರಿವರಂತೆ ॥ ೪೦ ॥

ಒಡೆಯರೆಲ್ಲರು ದೀಕ್ಷೆಗೊಂಡಮೇಲೊಡನಿರ್ದ
ಕಡುಹಿತದೂಳಿಗದವರು
ಹಡಗ ನೀಗಿದ ಪರದರು ಮಗುಳ್ವಂತೂರ
ಕಡೆಗೆ ಮಗುಳ್ದರೇನೆಂಬೆ ॥ ೪೧ ॥

ಕಡೆಯ ಚಾವಡಿಯೊಳಿರ್ದನು ಚಕ್ರಧರನಾಗ
ನಡೆತಂದು ಪೊರ್ದಿ ಸೇವಕರು
ಪಿಡಿದ ಕಠಾರಿ ಖಂಡೆಯಗಳ ಮುಂದಿಟ್ಟು
ಕೆಡೆದರು ವೈಸೀಡಿ ಮುಂದೆ ॥ ೪೨ ॥

ನೆರೆದವರೆಲ್ಲರು ಸುಮ್ಮನಿರ್ದರಾಗರವಿಂದ
ಕರಗಳ ಮುಗಿದೆಲೆ ಸ್ವಾಮಿ
ಸಿರಿವೆತ್ತ ಕುವರರು ನೂರ್ವರು ದೀಕ್ಷೆಗೆ
ತೆರಳಿದರವಧಾನವೆಂದ ॥ ೪೩ ॥

ವೀಳೆಯದೆಲೆ ಹಸ್ತದಿಂ ಬಿದ್ದುದೆದೆಯಲ್ಲಿ
ಬಾಳ ಬೀಸಿದ ತೆರನಾಯ್ತು
ಗೋಳಿಟ್ಟುದಾಸ್ಥಾನ ಕೈಸನ್ನೆಯಿಂದ ಭೂ
ಪಾಲಕ ನಿಲಿಸಿ ಕೇಳಿದನು ॥ ೪೪ ॥

ಕವಿದ ಮೋಹಾಂಧಕಾರವನು ಸುಜ್ಞಾನದ
ರವಿಯ ಶಕ್ತಿಯೊಳೊತ್ತಿ ನಿಲಿಸಿ
ಅವನೀಶನೊಂದೆರಳ್ಗಳಿಗೆಯಮೇಲೆ ಸಂ
ತವಿಸಿಕೊಂಡೊಡನಿಂತು ನುಡಿದ ॥ ೪೫ ॥

ತುಪ್ಪುಳುಮೀವೈಸೆ ರೇಖೆಗೆ ಬಂದುದಿಲ್ಲ
ದಪ್ಪ ಸಂಪೂರ್ಣವಾಯ್ತಿಲ್ಲ
ನೆಪ್ಪದೋರಿತು ಪ್ರಾಯ ನೆರೆವರಿನ್ನಿವರೆನು
ತಿಪ್ಪನಿತರೊಳಿಂತುಟಾಯ್ತೆ ॥ ೪೬ ॥

ಅಣ್ಣ ತಮ್ಮಂದಿರ ಕೇಳಿಯೊಳಲ್ಲದೆ
ಹೆಣ್ಣೊಳೊಂದಿರುಳಿದ್ದುದಿಲ್ಲ
ಕಣ್ಣಹಬ್ಬವ ಕಾಣ್ಬೆನಿವರ ಮದುವೆಗೆಂದು
ಕಣ್ಣೊಳಿಟ್ಟಿರ್ದೆವಿಂತಾಯ್ತೆ ॥ ೪೭ ॥

ಕಳುಹಿದನೆಲ್ಲರನೊಡನೆದ್ದು ಮಂದಿರ
ದೊಳಹೊಕ್ಕನಾ ಸಾರ್ವಭೌಮ
ಬಲುಗಾಳಿ ಬಾಧಿಸಿದೆಳಲತೆಯಂತೆ ಹೆಂ
ಗಳು ಬಂದರಧಿಕ ಶೋಕದೊಳು ॥ ೪೮ ॥

ಬಂಬಳ ಬಾಡಿದ ದೇಹ ಕಟ್ಟಿದ ತು
ರುಂಬು ಕಂದಿದ ಮೊಗದಿಂದ
ಕಂಬನಿಬಿಡುತೆಯ್ದಿ ಕಾಲಮೇಲ್ಕೆಡೆದು ಪ
ಲುಂಬಿದರೇನ ಬಣ್ಣಿಪೆನು ॥ ೪೯ ॥

ನಂದನರಗಲಿದರರಸ ಕಣ್ಮನಸಿಗಾ
ನಂದನಪ್ಪೋದರು ಹಾ ಹಾ
ಮುಂದೆಮ್ಮ ಕಣ್ಣಾರ್ತಿಗೆಳಸಿರ್ದೆವವರಿಂದೆ
ಕೊಂದರೆಂದಳಲಿ ನುಡಿದರು ॥ ೫೦ ॥

ಕಾಣೆವು ಕಂದರ್ಪರೂಪಿನ ಮಕ್ಕಳ
ಮಾಣಿಕ್ಯಗಳನೇವೆ ಹಾ ಹಾ
ಕ್ಷೋಣೀಶ ಗತಿಯಾವುದೆಂದೆದೆ ಬಿರಿದರು
ಬಾಣ ತಾಗಿದ ಹುಲ್ಲೆಯಂತೆ ॥ ೫೧ ॥

ತೋಯಜಾಕ್ಷಿಯರಿರ ಸೈರಿಸಿಯವರೆಮ್ಮ
ನೋಯಿಸಿ ಹೋಗಬಂದವರು
ಬಾಯಳಿದಿನ್ನು ಶೋಕಿಸಿದರೇನಹುದೆಂದು
ರಾಯ ನುಡಿದನವರೊಡನೆ ॥ ೫೨ ॥

ನಾನಿವರಿಗೆ ತಕ್ಕ ಪೆಣ್ಗಳಿಲ್ಲೆಂಟೆಂದು
ಜಾನಿಸುತಿರ್ದೆನಷ್ಟರೊಳು
ನಾನೊಲ್ಲೆ ಪೆಣ್ಣ ನಮ್ಮಯ್ಯನಾರಿಗೆ ಪೆಣ್ಣ
ತಾ ನೋಳ್ಪನೆಂಬ ಮಾತಾಯ್ತು || ೫೩ ||

ತಪಸಿಗೆಯ್ದಿದರೈಸೆ ಲೇಸೆನ್ನಿ ಬೇರೊಂದು
ಕುಪಥಕೆ ಹೋದವರಲ್ಲ
ಅಪಕೀರ್ತಿಮಾಡಿದರಳಲಬೇಕಲ್ಲವೆ
ವಿಪುಲಾರ್ಥಕಿದಕೇಕೆ ನೋವು || ೫೪ ||

ಒರ್ವೋರ್ವರಿಗೆ ನಿಮಗೋರೋರ್ವ ಕುವರರು
ಪರ್ವುಗೆಯಿಂದಾದ ನೋವು
ನೂರ್ವರೆನಗೆ ಸರಿಯುಲ್ಲೆ ಸೈರಿಸಿದೆನಾ
ಬಿರ್ವಾಗಿ ನೊಂದರೇನಹುದು || ೫೫ ||

ನಾರಿಯರೆಲ್ಲರ ಸಂತೈಸಿ ನಿಜ ನಿಜಾ
ಗಾರಕೆ ಕಳುಹಿ ರಾಜೇಂದ್ರ
ಗೌರವ ಲೀಲೆಯೊಳಿರ್ದನೆಂಬೆಡೆಗೆ ಕು
ಮಾರವಿಯೋಗದ ಸಂಧಿ || ೫೬ ||

———

# ತೀರ್ಥೇಶ ಪೂಜಾ ಸಂಧಿ

---

ಹರುಷದೊಳಿಂತು ಕೆಲವು ಕಾಲ ಪೋಗಲೊಂ
ದಿರುಳಿನ ಕಡೆಯ ಜಾವದೊಳು
ಉರುಮಂದರಾದ್ರಿ ಲೋಕಾಗ್ರಕೆ ನೆಗೆವುದ
ಭರತೇಶ ಕಂಡ ಸ್ವಪ್ನದೊಳು ॥ ೧ ॥

ಶ್ರೀ ಹಂಸನಾಥಯೆಂದೊಡನೆದ್ದು ಕುಳಿತನಾ
ಬಾಹುದೆಕ್ಕೆಯ ಪಟ್ಟದರಸಿ
ಆ ಹೊತ್ತಿನೊಳೆ ರಾಯನಳುವ ಕನಸ ಕಂಡು
ದೇಹ ಕಂಪಿಸುತಿರ್ದಳೊಡನೆ ॥ ೨ ॥

ಅವಧಿವಿಜ್ಞಾನದಿಂದಾರೈದೆನಬಲೆ ಕೇ
ಳಿವು ವೃಷಭೇಶ್ವರನಿನ್ನು
ಶಿವಲೋಕಕೆಯ್ದುವ ಸೂಚನೆಯೆನಲಿನ್ನು
ನವಗಾರು ಶರಣೆಂದಳಾಕೆ ॥ ೩ ॥

ನವಗಿನ್ನು ಹಂಸನಾಥನೆ ಶರಣವನಂತೆ
ಶಿವಲೋಕಕೆಯ್ದುವ ನಾವು
ಭವದಲ್ಲಿ ಬಾಳ್ವುದೆಲ್ಲವು ಸ್ವಪ್ನವೀ ಸ್ವಪ್ನ
ದವಗಡಕೆಣಿಸಬೇಡೆಂದ ॥ ೪ ॥

ರಾಯ ಪೂಜಿಪೆನೆಂದು ನೆನೆದು ಸುವಸ್ತುನಿ
ಕಾಯಸಹಿತ ಬಹುದೆಂದು
ರಾಯಸಗಳ ದಿಕ್ಕುದಿಕ್ಕಿಗೆ ಬರೆಸಿ ನಿ
ರಾಯಸವೆನೆ ಕಳುಹಿದನು ॥ ೫ ॥

ಮಳೆಯ ಗಾಳಿಯಪೋಲು ಬಿರ್‍ರನೆ ಬಂದು ತೆ
ಪ್ಪಲೊಳಿಪ್ಪು ನಿಂದು ಚಕ್ರೇಶ
ಚಲುವಿಕೆಯಾಗಿ ಪೂಜೆಯಮಾಳ್ಪೆನೆಂದು ತ
ನ್ನೊಳಗಿಂತು ನೆನೆದನೇನೆಂಬೆ ॥ ೬ ॥

ಗಗನದೊಳಿರ್ದುದು ಸಮವಸರಣ ದೇವ
ನಗಲಿದ ದೇಗುಲದಂತೆ
ಜಗದೀಶನದ್ರಿಯೊಳಿರ್ದನು ಮನೆಯ ದಂ
ದುಗ ಬಿಟ್ಟ ನಿಸ್ಪೃಹನಂತೆ ॥ ೭ ॥

ಸಿದ್ಧಶಿಲೆಯಪೋಲು ಶಿಲೆಯಿದ್ದುದದರಲ್ಲಿ
ಬದ್ಧ ಪಲ್ಯಂಕಯೋಗದೊಳು
ಸಿದ್ಧನಂತಿರ್ದ ದೇವನ ಕಂಡು ನೃಪ ಜಿನ
ಸಿದ್ಧಯೆಂದೊಲಿದನು ಶಿರವ ॥ ೮ ॥

ಮರುಕ ಪುಟ್ಟಿದುದು ಜಿನನಿದಿರಿನೊಳದರಿಂದ
ಮರುಗಿತಿಲ್ಲಾ ಚಕ್ರವರ್ತಿ
ಎರಗಿ ಮಹಾಪೂಜೆಗೆಸಗಿದನದನು ಬಾ
ಯ್ದೆರೆದು ಬಣ್ಣಿಪ ದಕ್ಷನಾರು ॥ ೯ ॥

ಕಡಲ ಮಾಗಧ ಮೊದಲೆನೆ ಹಿಮವಂತಾಂಕ
ಕಡೆಯೆನೆ ವ್ಯಂತರಾಧಿಪರು
ಕಡುಪಿನ ಖಗರು ಪೂಜಾವಸ್ತುಗಳ ತಂದು
ಹಿಡಿಯಲಾ ನೃಪನಳ್ತಿವಟ್ಟ ॥ ೧೦ ॥

ಫಲಪೂಜೆಗಳ ಮಾಡಿ ರನ್ನ ಚಿನ್ನದೊಳಾದ
ಫಲಗಳ ಮಂದರದಂತೆ
ನೆಲೆಗೊಳಿಸಿದನರ್ಘ್ಯಕೋಟಿಯನೆತ್ತಿದ
ನೊಲಿದೆಲ್ಲ ಜಯ ಜಯಯೆನಲು ॥ ೧೧ ॥

ಪರಮಾರ್ಘ್ಯವನೆತ್ತಿಯುರಿಸಲವರು ತುದಿ
ಗರಿಸಿದ ಮೂಡೆಗರ್ಪುರವು
ಉರಿವುತಿರ್ದುವು ಮುಝು ಕಪ್ಪುರಗಳ ಸಾಲು
ಗಿರಿಯ ಕಾಳ್ಕಿಚ್ಚುಗೊಂಡಂತೆ ॥ ೧೨ ॥

ರತ್ನದ ನಿಡುಗಿಂಡಿಗಳನೆತ್ತಿ ಭವದುಃಖ
ಯತ್ನಾಗ್ನಿ ಕೆಡಲೆಂದು ಜಗಕೆ
ನೂತ್ನಮಂತ್ರವನೋದಿ ಶಾಂತಿಧಾರೆಯು ರಾಜ
ರತ್ನ ಮಾಡಿದನಾದಿಜಿನಗೆ ॥ ೧೩ ॥

ದ್ವಾದಶಗಣಗೂಡಿ ತನ್ನವರೊಡಗೂಡಿ
ಯೋದುತ ಸ್ತೋತ್ರ ಮಂತ್ರಗಳ
ಆದಿನಾಥನ ಬಲಗೊಂಡನಾ ನೃಪತಿ ಪ್ರ
ಮೋದಕ್ಕೆ ಸುರರರ್ತಿವಡಲು ॥ ೧೪ ॥

ಹಗಲಿಂತು ಹೋದುದು ಜಿನಸಂಗಪ್ರಭೆಯಿಂದ
ಹಗಲಿನಂತಿರ್ದುದು ರಾತ್ರಿ
ನೆಗಳಿದ ಘಳಿಗೆಯ ಸನ್ನೆಯಿಂದಿರುಳೆಂದು
ಬಗೆದುದು ಕೂಡಿದ ಪರಿಸೆ ॥ ೧೫ ॥

ಮೇರುವಿಗೆಂಟದ್ರಿ ಕೆಲದಲ್ಲಿ ಗೋಡೆಯಾ
ಕಾರದೊಳಿರಲವ ಜರೆದು
ತಾರಾದ್ರಿಗೆಂಟದ್ರಿ ನೇರದೊಳಿದ್ದಂತೆ
ತೇರಿದ್ದುವೆಂಟು ದಿಕ್ಕಿನೊಳು ॥ ೧೬ ॥

ಸುರಿವ ಪೂಮಳೆ ಸೂಸಲುರಿಬಾಣ ಗಗನದೊ
ಳುರವಣಿಸುವ ಪಾತ್ರದಿಂದ
ಗರಿಗರಿ ಗೀಕು ಗಿರ್ರೆಂಬ ಗಾಲಿಗಳಿಂದ
ಸರದೋರಿ ಹರಿದುವಾ ತೇರು ॥ ೧೭ ॥

ಹೊಸ ಹೊಸ ಪರಿಯ ತೇರೊಂದೊಂದು ದಿನಕೆ ಮ
ತ್ತಸಮ ನೂತನ ಪೂಜೆ ನೃತ್ಯ
ರಸ ರಸಾಯನದೂಟ ಪರಿಸೆಗೆ ಸಂದು ರಾ
ಜಿಸಿತಿಂತು ಪದಿನಾಲ್ಕು ದಿವಸ ॥ ೧೮ ॥

ಕಡೆಯ ದಿನದೊಳು ಮೂರನೆಯ ಜಾವದೊಳೆಲ್ಲ
ಕಡೆಯಿಂದ ಕೂಡಿದ ಪ್ರಜೆಗೆ
ನಡೆಗಂಡು ಸಂಘಪೂಜೆಯ ಮಾಡಲಾ ಚಕ್ರಿ
ತೊಡಗಿದನೇನ ಬಣ್ಣಿಪೆನು ॥ ೧೯ ॥

ಗಣಧರರೆಂಭತ್ತುನಾಲ್ವರ್ಗೆ ಭಕ್ತಿಯೊ
ಳ್ಮಣಿದು ಮತ್ತವರನುಮತದಿ
ಗಣನೆಯಿಲ್ಲದ ಭವ್ಯಗಣಕೆ ಚಕ್ರೇಶ ಮ
ನ್ನಣೆಗೈದನುಚಿತವೃತ್ತಿಯೊಳು ॥ ೨೦ ॥

ದಾರಿದ್ರ್ಯ ಜಗದೊಳಿಲ್ಲೆಂಬಂತೆ ಹೋಯ್ತು ಮ
ತ್ತಾ ರಾತ್ರಿ ಹರಿದುವು ತೇರು
ಘೋರಾಮುನೀ ಜನ್ಮಕಿನ್ನು ಪೂಜಿಪ ವ್ಯವ
ಹಾರಕುದ್ಯಾಪನೆಯಾಯ್ತು ॥ ೨೧ ॥

ಗಂಧ ಪನ್ನೀರು ಪುಷ್ಪಗಳಿಂದ ಭೂಮಿ ಸು
ಗಂಧವಾಯ್ತದ್ರಿ ಕಪ್ಪಾಯ್ತು
ಗಂಧವಾಹಕನೆಂದು ಗಾಳಿಗೆ ಪೆಸರೆಂದು
ಬಂಧುರವಾಯ್ತಲ್ಲಿ ಸುಳಿದು ॥ ೨೨ ॥

ಸ್ವರ್ಗಪಥವ ಬಹು ಪ್ರಜೆ ಗಳಿಸಿತು ಕೂಡೆ
ತಾಗೊಂಡು ನೃಪನ ಕೀರ್ತಿಸಿತು
ತೇರ್ಗಳು ಹರಿದಮೇಲಾ ರಾತ್ರಿ ದೇವೇಂದ್ರ
ಸ್ವರ್ಗದಿಂದಿಳಿದನೇನೆಂಬೆ ॥ ೨೩ ॥

ಬಣ್ಣ ಹಾರದ ಪ್ರಾಯ ಜಾರದ ಮೈ ಬಿಡು
ಗಣ್ಣುಗಳೆಸೆಯೆ ನೋಟಕರ
ಕಣ್ಣ ಕೈಸೆರೆವಿಡಿವುತ ಬಂದರಾ ಸಗ್ಗ
ವೆಣ್ಣುಗಳವನನೋಲೈಸಿ ॥ ೨೪ ॥

ದೇವಗೆ ಮುನಿಗಳ್ಗೆ ಸತಿಗೂಡಿ ಪ್ರೌಢಮಟ್ಟು
ಭಾವೆಯ ದೂರಕೆ ಸಾರ್ಚಿ
ದೇವೇಂದ್ರ ಬಂದು ಪೂಜಾವಿಭವಕೆ ಮೆಚ್ಚಿ
ದೇವನಾತ್ಮಜನನಪ್ಪಿದನು ॥ ೨೫ ॥

ಪಡೆದನೊ ದೇವರ ದೇವ್ ರೋಹಣಶೈಲ
ಪಡೆದಂತನರ್ಘ್ಯರತ್ನವನು
ಪೊಡವಿ ಮೂರನು ಪುರೆಯಿಡಿಸಿದ ಮಗನನೆಂ
ದೊಡನೆ ಬೋಳೈಸಿದನುಬ್ಬಿ ॥ ೨೬ ॥

---

# ಜಿನಮುಕ್ತಿಗಮನ ಸಂಧಿ

---

ಪರಮಪೂಜೋತ್ಸವದೊಳು ರಾತ್ರಿ ಹೋಯ್ತುಮ
ತ್ತರದರುಣೋದಯವಾಯ್ತು
ಪುರುಪರಮೇಶ್ವರ ಜಯ ಜಯೆಂದೊಸೆದು
ಪರಿಸೆ ವಂದನೆಗೆಯ್ದುದೆಲ್ಲ ॥ ೧ ॥

ಪಳುಕಿನ ಕೊಡದಲ್ಲಿ ತುಂಬಿದ ಪಾಲ ನಿ
ರ್ಮಲತೆಯ ನಗುತ ದೇಹದೊಳು
ಜಳಜಳಿಸುವ ವಿಮಲಾತ್ಮನೊಳಗೆ ಮೂಡಿ
ಮುಳುಗಾಡುತಿರ್ದನಾ ಸ್ವಾಮಿ ॥ ೨ ॥

ಆಕಾಶವನ್ನೊಂದು ಮಾರಿಕ್ಕುವಂತೆ ಮೂ
ಲೋಕವ ಚೋಟಿಕ್ಕುವಂತೆ
ದಾಕೊಂದರೊಳು ಕೋಟಿ ವಾರ್ಧಿಯ ಪಾಯ್ವ ನಿ
ರಾಕುಲೋನ್ನತಿಯಿರ್ದುದೊಳಗೆ ॥ ೩ ॥

ಒಡಲೆಂಬ ಕುಂಭದೊಳಿರ್ದಾತ್ಮನೆಂಬ ಪಾ
ಲ್ಗಡಲಿಗೆ ಸಮ್ಯಕ್ತ್ವಗಿರಿಯ
ಕಡೆಗೋಲನಿಟ್ಟು ಚಿದ್ಭಾವದ ನೇಣಿಂದ
ಕಡೆವವೊಲಿರ್ದುದಾ ಧ್ಯಾನ ॥ ೪ ॥

ಬೆಳಗನೆ ಮಿಾವಂತೆ ಬೆಳಗನೆ ಪಾಯ್ವಂತೆ
ಬೆಳಗಿನೋಕುಳಿಯಾಡುವಂತೆ
ಬೆಳಗಿನೊಳೋಲಾಡಿ ತೇಂಕಾಡುವಂತೆ ತ
ನ್ನೊಳಗೆ ತಾನಿರ್ದನಾ ಪರಮ ॥ ೫ ॥

ಒಮ್ಮೆಯೆಪ್ಪತ್ತೆರಳ್ಕರ್ಮ ಜಾರಿದುವು ಕೂ
ಡೊಮ್ಮೆ ಬಿದ್ದುವು ಪದಿಮೂರು
ಜುಮ್ಮನೆ ಮೂರಂಗ ಬಯಲಾದುವಾ ಪರ
ಬೊಮ್ಮ ಲೋಕಾಗ್ರಕೆ ನೆಗೆದ ॥ ೬ ॥

ತಿರುಗದ ಪದವದು ತೀರದ ಘನಸುಖ
ನರಸುರೋರಗರಿಗಶಕ್ಯ
ವಿರಚಿಸಲರಿದಾದ ಮುಕ್ತಿಸಾಮ್ರಾಜ್ಯದೊ
ಳಿರುತಿರ್ದನಾ ಸಿದ್ಧನತ್ತ ॥ ೭ ॥

ಇತ್ತಲಾತನ ದೇಹ ಪರಿವುದು ಮೇಲಿರ್ದ
ವೃತ್ತಸಮವಸರಣೋರ್ವಿ
ಎತ್ತ ಪೋದುದೊ ಮರ್ಬು ಬಯಲಾಯ್ತು ಮುಗಿಲೊಡ್ಡು
ಮುತ್ತಿರ್ದು ಮಾಯವಾದಂತೆ ॥ ೮ ॥

ಸಮವಸರಣ ಬಯಲಪ್ಪುದು ಜಿನರ ಸಂ
ಭ್ರಮ ಗಂಧಕುಟಿಗಳಾಕ್ಷಣವೆ
ಗಮಿಸಿದುವಿಚ್ಛೆ ಬಂದತ್ತಲಾದೀಶನಿ
ಲ್ಲಮೆಯೊಳಿನ್ನಾರಿಹರಲ್ಲಿ ॥ ೯ ॥

ಅಯ್ಯನ ಯೋಗವ ಸಿಟ್ಟಿಸುತಿರ್ದಿರ್ದು
ಮೆಯ್ಯಳಿದರ್ಹ ಲಂಘಿಸಲು
ಕಯ್ಯವಳಿದು ಮೇರೆ ಕಂದಿತು ಚಕ್ರಿಗೆ
ಚುಯ್ಯನೇರಿತು ಶೋಕವೊಳಗೆ ॥ ೧೦ ॥

ಏರಿತು ಮೂರ್ಛೆ ಸರ್ವರ ಮುಂದೆ ಗಂಭೀರ
ಜಾರದಂದದೊಳೊತ್ತಿ ತಡೆದ
ಮೀರಿತು ಪಿತಮೋಹ ತಡೆದು ತಡೆದು ತಾಳ
ಲಾರದೆ ಮೂರ್ಛೆಗೆ ಸಂದ ॥ ೧೧ ॥

ಕೆಳೆಯರು ಶೈತ್ಯೋಪಚಾರದಿಂದೆಬ್ಬಿಸೆ
ಕುಳಿತು ಕಂಬನಿ ಕಣ್ಣೊಳೊಗುತ
ತಿಳಿವುಗೆಟ್ಟಾ ಚಕ್ರಿ ತನ್ನಯ್ಯ ಮೊದಲಿರ್ದ
ಶಿಲೆಯತ್ತ ನೋಡಿ ಶೋಕಿಸಿದ ॥ ೧೨ ॥

ಹಾ ಹಾ ಸ್ವಾಮಿ ನನ್ನೊಡೆಯ ನನ್ನಪ್ಪಾಜಿ
ಮೋಹಾಸುರದರ್ಪಮಥನ
ಬಾಹಿರದೊಳಗೆನ್ನನೀಡಾಡಿ ಮುಕ್ತಿಗೆ
ಹೋಹರೆ ಪುರುಪರಮೇಶ ॥ ೧೩ ॥

ಪಟ್ಟವೆಂದೊಂದು ಪಾಶವ ಕಟ್ಟಿ ರಾಜ್ಯವ
ಕೊಟ್ಟೊಂದು ಹೊರೆಗೊಡುವಂತೆ
ಕಟ್ಟಕಡೆಯೊಳೆನ್ನ ಮುಕ್ತಿಗೆಯ್ದಿಸದಿಂತು
ಬಿಟ್ಟು ಹೋಹರೆ ಮಹಾದೇವ ॥ ೧೪ ॥

ಎಲ್ಲಿ ಹೋದುದು ನಿನ್ನ ಸಭೆ ನಿನ್ನ ದಿವ್ಯಾಂಗ
ಚೆಲ್ಲಿರ್ದ ಗಂಧಕುಟಿಗಳು
ಬೆಳ್ಳಿಯ ಬೆಟ್ಟವೈಸಿರಿ ಮಾಯವಾದುದಿ
ನ್ನೆಲ್ಲಿಯದುಳಿದರ ಬದುಕು ॥ ೧೫ ॥

ಆಗಲಿನ್ನಳಲಿದರೇನಾಯ್ತು ನೀಸಿತ್ತ
ಯೋಗಮಾರ್ಗದೊಳಾನು ಬಹೆನು
ಶ್ರೀಗುರುಹಂಸನಾಥಾಯ ನಮೋಸ್ತೆಂದು
ಬೇಗೆಯ ಕೂಡೆ ನಂದಿಸಿದ ॥ ೧೬ ॥

ವರಪುತ್ರ ಮಿತ್ರ ಪ್ರಧಾನ ಮುಂತಾದಾಪ್ತ
ಪರಿವಿತಾನವ ಕೂಡಿಕೊಂಡು
ಗುರುಹಂಸನಾಥನ ಭಾವಿಸುತಾ ಜಾಣ
ರರಸನೆದ್ದನು ತನ್ನ ಪುರಕೆ ॥ ೧೭ ॥

ಮಿಗೆ ಮಾಘ ಬಹಳ ಚತುರ್ದಶಿಯಂದು ಮು
ಕ್ತಿಗೆ ಸಂದನಾದಿತೀರ್ಥೇಶ
ಹಗಲಿರುಳೆನ್ನದಾ ದಿನ ಸರ್ವಜನಕರ್ತಿ
ಸೊಗಸಿತು ಮೂಲೋಕದಲ್ಲಿ || ೧೮ ||

——

# ರಾಜ್ಯಪಾಲನ ಸಂಧಿ

---

ಸುಮುಖದಿ ಸುಖದಲ್ಲಿ ಮತ್ತೆ ಕೆಲವು ಕಾಲ
ಗಮಿಸಲೊಂದಾನೊಂದು ಪಗಲು
ನಮಿರಾಜ ವಿನಮಿರಾಜರು ದೀಕ್ಷೆವಡೆದ ಸಂ
ಯಮವಾರ್ತೆ ಬಂದಿತು ನೃಪಗೆ ॥ ೧ ॥

ಉಗುಳ್ದನಾಕ್ಷಣವೆ ತಂಬುಲವ ಕೊರಳ ಸೆರೆ
ಬಿಗಿದು ಕಣ್ಣೀರ್ಗಳುಮ್ಮಿದುವು
ಒಗಲೀಯದೊತ್ತಿ ನಿಲ್ಲಿಸಿದನು ಮೈದುನ
ರಗಲೆ ನೋವಹುದು ಸೈರಿಸಿದ ॥ ೨ ॥

ಅರಮನೆಗೆದ್ದನಾಗಳೆ ಸುಭದ್ರಾದೇವಿ
ಪಿರಿದು ಶೋಕಿಸುತಿರಲವಳ
ಸುರುಚಿರೋಕ್ತಿಯೊಳು ಸಂತೈಸಿದನಾ ಜಾಣ್ಮೆ
ಭರತೇಶಗೇನಿಂದು ಪೊಸತೆ ॥ ೩ ॥

ಅಳಿಯಂದಿರೆಡೆಗೆ ನಾನಿದ್ದೆನಂಜದಿರಿಯೆಂ
ದೊಳುನುಡಿದೋರಿ ರಾಯಸವ
ಕಳುಹಿ ಸಂತೈಸಿ ಸಂತೋಷದಿ ಕಾಲವ
ಕಳೆಯುತಿರ್ದನು ಮಹೋದಾತ್ತ ॥ ೪ ॥

ಸ್ಪೃಹೆಮಾಡಿದರ್ಥವ ಕೊಡುವ ಚಿಂತಾಮಣಿ
ಮಹಿತಾರ್ಥ ನವಸಿದ್ಧಿಯುಂಟು
ಗುಹೆಯಲ್ಲಿ ಪ್ರಭೆದೋರ್ಪ ಕಾಕಿಣಿಯುಂಟೆನ್ನು
ಗೃಹದೊಳಿರನೆ ಸುಖದಲ್ಲಿ ॥ ೫ ॥

ಪರಬಾಧೆ ತನಗಿಲ್ಲ ತಾನಿನ್ನು ದಂಡೆಯ್ದಿ
ಪರರ ಸಾಧಿಪ ಚಿಂತೆಯಿಲ್ಲ
ಪರವಿದು ತನ್ನದಿದೆಂದರಿದಾತ್ಮತ
ತ್ಪರನಾಗಿ ಭೋಗಿಸುತಿರ್ದ ॥ ೬ ॥

ಗಂಧಕುಟಿಗಳು ಚಾರಣರಡಿಗಡಿಗೆ ಸಂ
ಬಂಧಿಸುತಿಹರಲ್ಲಿಗಲ್ಲಿ
ಗಂಧೇಭ ಜಾತ್ಯಶ್ವವಲ್ಲಲ್ಲಿ ಹುಟ್ಟಿ ವ
ಸುಂಧರೆ ಸುಲಭವಾಗಿಹುದು ॥ ೭ ॥

ಅಲ್ಲಲ್ಲಿ ರತ್ನ ಹಟ್ಟಿಹುವು ಹೂಳಿದ ನಿಧಿ
ಪಲ್ಲುಗಿರಿದು ತೋರುತಿಹುವು
ಅಲ್ಲದೆ ಕೊನೆಯಂತೆ ಚಿನ್ನ ಹುಟ್ಟಿಹುದೇನ
ಸೊಲ್ಲಿಪೆನವನ ಕಾಲದೊಳು ॥ ೮ ॥

ಕಾಡೆಲ್ಲ ಶ್ರೀಗಂಧವೃಕ್ಷ ಕಪ್ಪುರವಾಳೆ
ಕೂಡೆ ಕತ್ತುರಿಮಿಗದೊಡ್ಡು
ನಾಡೆಲ್ಲ ತ್ಯಾಗಿ ಭೋಗಿಗಳ ಸಂಪದದಲ್ಲಿ
ಕೋಡಿವರಿದುದೇನನೆಂಬೆ ॥ ೯ ॥

ನೀಲಾಬ್ಜ ತಾವರೆ ನೆರೆದ ನೀರ್ಗೆರೆ ಗಂಧ
ಶಾಲಿ ಜೋತೊಲೆದಗದ್ದೆಗಳು
ಗಾಳಿ ಘಮ್ಮೆಂಬ ನಾನಾ ವನಗಳು ರಸ
ದಾಳಿಯಮಲೆ ವಿರಾಜಿಪುದು ॥ ೧೦ ॥

ಊರೂರೊಳಮೃತಾನ್ನ ಛತ್ರಿ ದಾರಿಯೊಳೆಳೆ
ನೀರು ಸಕ್ಕರೆಯುರವಟಿಗೆ
ವಾರ ತಿಥಿಗೆ ನೋಂಪು ಮುನಿಭುಕ್ತಿ ವಿಪ್ರಸ
ತ್ಕಾರ ಭೋರೆನಲೊಪ್ಪುತಿಹುವು ॥ ೧೧ ॥

ಧರೆಗೆ ಸ್ವರ್ಗಕೆ ಸುರಸೋಪತಿ ನಡೆವುದು
ಸಿರಿ ಸರ್ವದೇಶ ತುಂಬಿಹುದು
ಧರೆಯನಾಳುವ ಚಿಂತೆ ತನಗಿಲ್ಲದಿಪ್ಪನಾ
ಭರತೇಶನೇನ ಬಣ್ಣಿಪೆನು ॥ ೧೨ ॥

ದೇಗುಲ ಭಾರವ ಗೋಡೆ ಕಂಭದ ಮಂಡೆ
ಗಾಗಿಸಿ ದೇವರಿಪ್ಪಂತೆ
ಭಾಗಿಸಿ ಧರೆಯ ದಂದುಗವನಾಪ್ತರಿಗೆ ಸಂ
ಯೋಗಿಸಿ ಸುಖದಿ ತಾನಿಹನು ॥ ೧೩ ॥

ಪುಣ್ಯಫಲವನುಂಡು ತೀರಿಸುತಾತ್ಮಲಾ
ವಣ್ಯವನೊಳಗೆ ಸಿಟ್ಟಿಸುತ
ಗಣ್ಯವೆ ಮುಕ್ತಿಯೆಂದೆಂಬಭಿಪ್ರಾಯವ
ರೇಣ್ಯದೊಳಿರ್ದನಾ ಧನ್ಯ ॥ ೧೪ ॥

ಒಪ್ಪುವ ಧ್ಯಾನಯೋಗಾನಿಲಬಲದಿಂದ
ಕಪ್ಪಿನ ಮುರಿಮೀಸೆ ಮೆರೆಯೆ
ಇಪ್ಪತ್ತೇಳೆಂಟು ವರಿಸದ ಜವ್ವನ
ತಪ್ಪದಿರ್ದನು ಬಹುಕಾಲ ॥ ೧೫ ॥

ಸರಸಿಜಾಕ್ಷಿಯರೊಡನರ್ತಿಮಾಡುತ ಮೂರು
ವರೆಕೋಟಿ ಬಂಧುವರ್ಗವನು
ಹರುಷವೇರಿಸುತ ಷಟ್ಖಂಡ ಜೀಯೆನೆ ಚಕ್ರ
ಧರನಿರ್ದನೊಲಿದಯೋಧ್ಯೆಯೊಳು ॥ ೧೬ ॥

# ಭರತೇಶ ನಿರ್ವೇಗ ಸಂಧಿ

---

ಕೀರ್ತಿಗೆ ತ್ರಿಭುವನ ಸಾಲದು ತೇಜಕೆ
ಮಾರ್ತಾಂಡ ಸಾಟಿಯಲ್ಲೆಂದು
ಕೀರ್ತಿಸೆ ನರ ಸುರರಾಳುತಿರ್ದನು ಚಕ್ರ
ವರ್ತಿ ಭೂತಳವನೇನೆಂಬೆ ॥ ೧ ॥

ಆ ವಿಭು ಮತ್ತೊಂದು ಪಗಲು ಮೂವತ್ತೆರ
ಳ್ಸಾವಿರ ಮುಕುಟವರ್ಧನರ
ತೀವಿದೊಡ್ಡೋಲಗದೊಳಗಿರಲೊಂದು ಸು
ಖಾವಾಪ್ತಿ ತೋರಿತೇನೆಂಬೆ ॥ ೨ ॥

ನಿನ್ನಯ ಮುಖಕಿದು ಸರಿಯೊ ಮೇಣಲ್ಲವೊ
ಚನ್ನಿಗರರಸ ನೀನೊಲೆದು
ಚೆನ್ನಾಗಿ ನೋಡೆಂಬುವೊಲು ಮುಖಚಿತ್ರಕ
ಕನ್ನಡಿವಿಡಿದನಾ ನೃಪಗೆ ॥ ೩ ॥

ಹೊಳೆಹೊಳೆದರಸ ನಿಟ್ಟಿಸುವಾಗ ಮೊಗವೆಡ
ಬಲಕೊಲೆವಂದವೊಪ್ಪಿದುದು
ಇಳಿಯೊಡೆತನವಿನ್ನು ಸಾಕೆಂದು ಮನ ಹೇಸಿ
ತಲೆಗೊಡಹುವನೊಯೆಂಬಂತೆ ॥ ೪ ॥

ಚಿರಕಾಲ ಬೇಟವ ಮಾಡಿ ಮುಕ್ತ್ಯಂಗನೆ
ಕರೆಯಟ್ಟಿದಾ ದೂತಿ ಬಂದು
ಪೊರೆಸಾರ್ದು ಪೇಳ್ವಂತೆ ನೃಪನ ಕೆನ್ನೆಯೊಳೊಂದು
ನೆರೆಯಿದ್ದುದಾ ಸಮಯದೊಳು ॥ ೫ ॥

ಮುಟ್ಟಿಲಾಗಿರ್ದುದಾಯುಷ್ಯ ಮುಕ್ತಿಗೆ ತಾನು
ತೊಟ್ಟನೆ ನಾಳೆ ಲಂಘಿಸುವ
ತಿಟ್ಟವಿರ್ದುದು ಘಾತಿಯಾ ದಿನ ಜಾರುವ
ಕಟ್ಟಣೆಯಿರೆ ಕಂಡನೊಳಗೆ ॥ ೬ ॥

ಮರೆದಿರ್ದೆನಹುದೆನ್ನನೀ ನರೆ ಜನಿಸಿಯೆ
ಚ್ಚರಿಸಿತಲ್ಲಾಯೆಂದು ನಕ್ಕ
ಹರಿದುದು ಸಂಸಾರಸುಖದಾಶೆ ಮನದಲ್ಲಿ
ನೆನೆದುದಾ ನೃಪಗೆ ವಿರಕ್ತಿ ॥ ೭ ॥

ಸುಡು ಸುಡು ನನ್ನ ನಡೆಯ ತಪಸೆಂಬ ಪಾ
ಲ್ಗಡಲೊಳು ಮೂಡಿ ಮುಳುಗದೆ
ಜಡದೇಹ ಸುಖವೆಂಬ ಲವಣಸಮುದ್ರವ
ಕುಡಿದು ಬಾಯಾರಿದೆನೆಂದ ॥ ೮ ॥

ನೋಡು ನೋಡೆನ್ನೊಡಹುಟ್ಟಿದವರು ಮೀಸೆ
ಮೂಡುವಂದೆ ದೀಕ್ಷೆವಡೆದು
ಕೂಡಿದರಮೃತವನಿಂದುವರೆಗೆ ಜೋಲಿ
ಮಾಡಿದೆ ನಾನೊಬ್ಬನೆಂದ ॥ ೯ ॥

ಒಡಹುಟ್ಟಿದವರ ವಾರ್ತೆಯದೇಕೆ ಮತ್ತೆಯೆ
ನ್ನೊಡಲೊಳು ಹುಟ್ಟಿದರ್ಭಕರು
ಕಡುದೀಕ್ಷೆಯೊಳು ಸಿದ್ಧಿವಡೆದರಲ್ಲವೆ ನನ್ನ
ಜಡತೆಯ ನೋಡು ನೋಡೆಂದ ॥ ೧೦ ॥

ಆಗಲಿ ನಮ್ಮವರೆಲ್ಲ ಮುಕ್ತಿಗೆ ಮುಂದೆ
ಹೋಗಲಿ ಹೋದರೇನಾಯ್ತು
ಹೋಗುತ ಹಾದಿಯನುಡೆ ಸುತ್ತಿಕೊಂಡರೆ
ಲಾಗಿಸಿದರೆ ಮಾರ್ಗವಿದಕೊ ॥ ೧೧ ॥

ಬುದ್ಧಿಸಾಗರನೊಡನೆದ್ದು ಕೈಮುಗಿದು ಸು
ವೃದ್ಧಿ ಸಂಪದವಿದರಿಂದ
ಉದ್ಧದ ಸಿರಿಯುಂಟೆ ಸುಖಿಸೀಗ ತಪಸಿನ
ಸುದ್ದಿಯೇಕವನೀಶಯೆಂದ || ೧೨ ||

ಅಲ್ಲವೈ ಕೇಳೆಂದು ಪುರುನಾಥ ತನಗೇನು
ಮಿಲ್ಲದೆ ತಪಸಿಗೆಯ್ದಿದನೆ
ಬಲ್ಲವಗೀತನು ಸ್ಥಿರವಲ್ಲ ಕುಟ್ಟಿಗೊಂ
ಡಲ್ಲವೈಯೆಂದನಾ ಚಕ್ರಿ || ೧೩ ||

ಆರು ಖಂಡವ ಗೆಲ್ದರೇನಾಯ್ತು ಕರ್ಮದ
ಮೂರು ಕಾಂಡವಗೆಲ್ಲದೆನಗೆ
ಮೂರು ರನ್ನವೆ ಜೀವಹಿತವೈಸೆ ಹದಿನಾಲ್ಕು
ಸೋರೆಯ ಮಣಿಯೊಳ್ಳೇನೆಂದ || ೧೪ ||

ಅರಿಯದಾನೊಂದನಾಡಿದೆನು ನೀ ಕಂಡುದೆ
ತೆರನೆನಗದು ತಾನೆ ಶರಣು
ಮರೆವುದೆಮ್ಮಯ ತಪ್ಪನೆಂದು ಚಕ್ರಿಯ ಪಾದ
ಕೆರಗಿ ಕುಳಿತನವನೊಡನೆ || ೧೫ ||

ಮಗನೆ ಬಾ ದೊಡ್ಡಣ್ಣ ರಾಜ್ಯವನಾಂತು ದೀ
ಕ್ಷೆಗೆ ನನ್ನ ಕಳುಹೆಂದು ಚಕ್ರಿ
ತೆಗೆದಪ್ಪಿ ನುಡಿದನಾ ನುಡಿಗೇಳ್ದು ಕಣ್ಣನೀ
ರೊಗುತ ಮೂರ್ಛೆಗೆ ಸಂದನವನು || ೧೬ ||

ಆನೆಯ ರಂಜಿಕೆ ಕಳಭಕಹುದೆ ದೇವ
ರಾನುವ ರಾಜ್ಯಭಾರವನು
ಆನಲಾಪೆನೆ ನಾನು ಸ್ವಾಮಿಯಿಂತೇಕೆ ಸಂ
ಧಾನಿಪುದೆಂದನಾ ಕುವರ || ೧೭ ||

ದೇವರಿಗಿಷ್ಟವಾದನ್ನ ಭೂಷಣ ವಸ್ತ್ರ
ವೀವುತ ಪೊರೆದಿಪ್ಪು ಕಾಲ
ಈ ವೇಳೆಯೊಳು ದೇವರೇಕೆ ಕೊಕ್ಕರಿಸಿದ
ಭೂವಲಯವನೀವುದೆಂದ || ೧೮ ||

ನುಡಿಜಾಣನೆಂಬುದ ಬಲ್ಲೆನೈ ಮಗನೆಯೀ
ಪೊಡವಿ ಹೆಡ್ಡಗೆ ಕಷ್ಟವಹುದು
ಕಡುಜಾಣಗಿದು ಕಷ್ಟವಲ್ಲಿಷ್ಟವಹುದೊಡಂ
ಬಡು ಪಟ್ಟಕೆಂದನು ಜನಕ || ೧೯ ||

ಮೋಕ್ಷರಾಜ್ಯಕೆ ದೇವರಿಚ್ಛೈಸಿ ನನಗೆ ಮ
ತ್ತೀ ಕ್ಷೇತ್ರವಿತ್ತರೇಕಹುದು
ದೀಕ್ಷೆಯೆ ಶರಣು ನಾನೂ ಬಪ್ಪೆನೆಂದವ
ನಾಕ್ಷೇಪವಿಲ್ಲದಾಡಿದನು || ೨೦ ||

ಅಪ್ಪಾಜಿ ನನಗೆ ರಾಜ್ಯವನಿತ್ತು ಮುನಿಯಾದ
ನೊಪ್ಪಿಸಬೇಕಾನು ನಿನಗೆ
ಒಪ್ಪಬೇಕದಕೆ ನೀನೀಗ ಸೈರಿಸಿ ಹಿಂದೆ
ಬಪ್ಪುದು ತಪಸಿಗೆಮ್ಮಂತೆ || ೨೧ ||

ಆ ನುಡಿಗೇಳ್ದಿದೆ ಹವ್ವನೆ ಹಾರಿ ಸು
ಮಾನಗುಂದಿರ್ದನಾ ಕುವರ
ನೀನುತ್ತರಂಗೊಟ್ಟರೆನ್ನಾಣೆ ನಿಲ್ಲೆಂದು
ಸೂನುವ ಮಾತ ಕಟ್ಟಿದನು || ೨೨ ||

ಕರವಿಡಿದೊಡನರ್ಕಕೀರ್ತಿರಾಜನನೆತ್ತಿ
ಹರಿಪೀಠದಲ್ಲಿ ಕುಳ್ಳಿರಿಸಿ
ದೊರೆ ತನ್ನ ಮಕುಟವನಾತಗಿಕ್ಕಿದನು ಭೂ
ಸುರವೃಂದ ಜಯ ಜಯಯೆನಲು || ೨೩ ||

ತೆಗದಾದಿರಾಜನ ಕೆಲದಲ್ಲಿ ಪುಟ್ಟ ಗ
ದ್ದುಗೆಗಿಟ್ಟು ಯುವರಾಜನೆಂದು
ಮಿಗೆ ಕಂಠಮಾಲೆಯನಿಕ್ಕಿ ಸೇಸೆಯನಿಟ್ಟು
ಸುಗುಣ ರಾಜೇಂದ್ರ ಮನ್ನಿಸಿದ || ೨೪ ||

ಕಂಬಸಿಬಿಡುತಿರ್ದರಾ ಪುತ್ರರೊಡನೆನ್ನ
ಹಂಬಲ ಬಿಟ್ಟು ನೀವಿವರ
ಬೆಂಬಳಿವಿಡಿದಿಹುದೆಂದು ಭೂಪಾಲಕ
ದಂಬಕೆ ಕೈವೀಸಿ ಬಿಟ್ಟ || ೨೫ ||

ಮತ್ತೆ ನೋಡಿದನೆ ತನ್ನಯ ಪುತ್ರರೆಂದವ
ರತ್ತರಳಲಿಯೆಂದು ನೂಂಕಿ
ಮತ್ತೇಭದಂತೆ ಲೀಲೆಯೊಳು ತಪೋವನ
ದತ್ತೆಯ್ದುತಿರ್ದನಾ ಧೀರ || ೨೬ ||

ವಸುಧಾಧಿಪತಿ ದೀಕ್ಷೆಗಡಿಯಿಟ್ಟನೆನೆ ಕೇಳ್ದು
ಮುಸಗಿತು ಸತಿಯರ್ಗೆ ವಿರಹ
ಬಿಸಿಲೊಳೀಡಾಡಿದ ಮಾಂದಳಿರಂತಾದ
ರಸುವಿಗೆ ಮೂರ್ಛೆ ತಟ್ಟಿದುದು || ೨೭ ||

ಅಕ್ಕಟ ಚಕ್ರವರ್ತಿಯ ಮಹಾಭಾಗ್ಯ ಕ
ಣ್ಣಿಕ್ಕುವಷ್ಟಕೆ ಮಾಯವಾಯ್ತೆ
ಕಕ್ಕುಲಿತೆಯ ಸುಡು ಸುಡು ಕಷ್ಟವೆಂದು ಹೆ
ಮ್ಮಕ್ಕಳತ್ತರು ತಮ ತಮಗೆ || ೨೮ ||

ಬಾಳ ಬೀಸಾಡಿ ಹೋದವನಲ್ಲ ಮುಕ್ತಿಗೆ
ನಾಳೆಪಯಣವೆಂಬುದರಿದು
ಪೇಳದೆಯ್ದಿನ್ನೆಸೆ ನಮಗೂ ದೀಕ್ಷೆಯೆ ಗತಿ
ಯೇಳಿರೆಂದನುವಾದರೆಲ್ಲ || ೨೯ ||

ಸುಖದಲ್ಲಿ ಬಾಳ್ದು ನಿಮ್ಮಯ್ಯನಂದದಿ ಮೋಕ್ಷ
ಸುಖವೆಯ್ದಿರೆಂದೊಲ್ದು ಪರಸಿ
ಸುಖಕಾಗಿ ನಾವು ದೀಕ್ಷೆಯನಾಂಪೆವೆಂದೊರೆ
ದಖಿಲ ನಾರಿಯರು ಸಾಗಿದರು || ೩೦ ||

ತಡೆಯಬಾರದು ತಮ್ಮ ಪತಿಯ ಕೈಯೊಳೆ ದೀಕ್ಷೆ
ವಡೆದು ಸುಖಿಗಳಾಗಲೆಂದು
ಒಡನೆ ಪನ್ನಂಗ ಪಲ್ಲಕ್ಕಿಯೊಳ್ತಾಯ್ಗಳ
ಬಿಡುಗೆಗೊಟ್ಟರು ಕುಮಾರಕರು || ೩೧ ||

ಪುರದ ಕಾಂತೆಯರೆಲ್ಲ ಮದಿಲು ಮಾಡವನೇರಿ
ಪರಿಕಿಸಿ ಗೋಳಿಡುತಿರಲು
ಪರಿವಾರ ಪ್ರಜೆ ಶೋಕಗೈಯೆ ಪೆಂಗಳು ಹಿಂದೆ
ಬರೆ ರಾಯ ಮುಂದೆಯ್ದುತಿರ್ದ || ೩೨ ||

ಅಯ್ಯೋ ನಮ್ಮೊಡೆಯನೆ ಸಿರಿಯ ಕಾಮನ ಬಿಲ್ಲ
ರಯ್ಯವೊಲ್ತೋರಿ ಜಾರುವೆಯ
ಮೆಯ್ಯ ಪೊತ್ತವರ ಸುಖವ ಸುಡಲೆಂದು ಪೆ
ಣ್ಬುಯ್ಯಲೆದ್ದುದು ಪುರದೊಳಗೆ || ೩೩ ||

ಬೀದಿಯೊಳ್ನೀನೆಯ್ದುವಾಗ ಕಂಡರೆ ಸ್ವರ್ಗ
ವಾದಂತೆ ನಲವಪ್ಪುದೆಮಗೆ
ಹೋದುದೆ ನಮ್ಮ ಸಂಪತ್ತು ಹಾ ಹಾ ಯೆಂದು
ವೇದನೆಬಟ್ಟರಲ್ಲಲ್ಲಿ || ೩೪ ||

ಪೆಂಡಿರು ಮಕ್ಕಳು ಸೊಸೆಯರುವೆರಸಿ ಷ
ಟ್ಖಂಡವ ಜಯಿಸಿ ಮತ್ತವರ
ಕೊಂಡೊಯ್ಯುತಿರ್ದೆಯ ತಪಕೆಂದು ಪೆಂಗಳ
ತಂಡ ಗೋಳಿಟ್ಟುದಲ್ಲಲ್ಲಿ || ೩೫ ||

ಶೋಕಿಸುವವರತ್ತ ನೋಡದೆ ನೃಪತಿ ಪ
ರಾಕಿಂದಪುರವನು ದಾಂಟೆ
ಭೀಕರಾರಣ್ಯವ ಸಾರ್ದನು ಬಳಸಿರ್ದ
ನೇಕ ಪರಿಸ್ಪಂದವೆರಸಿ ॥ ೩೬ ॥

ಮಲಯಜತರುವಿರ್ದುದದರ ಮೂಲದೊಳೊಂದು
ಶಿಲೆಯಿರ್ದುದತಿ ತೆರಪಾಗಿ
ಕೆಲದವರ್ಜಯ ಜಯಯೆನಲು ಪಲ್ಲಕ್ಕಿಯಿಂ
ದಿಳಿದನಾ ನಿಶ್ಶಂಕಮಲ್ಲ ॥ ೩೭ ॥

————

# ಧ್ಯಾನ ಸಾಮರ್ಥ್ಯ ಸಂಧಿ

ತೆರೆಯ ಮರೆಯೊಳು ಸಿದ್ಧಾಸನದಲ್ಲಿ ಬಂ
ಧುರಶಿಖೆಯೊಳು ರಾಯ ಕುಳಿತು
ಗುರುವಿಲ್ಲ ತನಗೆ ತಾನೆ ಗುರುವೆಂಬುದ
ಹರಹಿದನೇನ ಬಣ್ಣಿಪೆನು ॥ ೧ ॥

ದೇಹಕಲ್ಲದೆ ವಸ್ತ್ರಭೂಷಣದೊಪ್ಪ ನಿ
ರ್ದೇಹದಾತ್ಮಸಿಗಿಲ್ಲವಿವರ
ಮೋಹವೇನೆಂದು ವಸ್ತ್ರಾಭರಣವ ಬಿಸು
ಟಾ ಹೇಮವರ್ಣನೊಪ್ಪಿದನು ॥ ೨ ॥

ಆಸನಾಯತ ಮುಚ್ಚಿದಕ್ಷಿಗಳಿಂದ ಮ
ಹಾ ಸಿದ್ಧಬಿಂಬದಂತೆಸೆವ
ಭಾಸುರ ಬಾಹ್ಯಸಾಮಗ್ರಿಯೊಳ್ಮುನಿ ಧ್ಯಾನ
ಬೀಸರಿಸದೆ ಸಿಂದನೊಳಗೆ ॥ ೩ ॥

ನೋಡುತಿರ್ದನು ತನ್ನ ನಿಜವ ಕರ್ಮಗಳು ಕೆ
ಟ್ಟೋಡುತಿರ್ದುವು ಕಂಡ ಕಡೆಗೆ
ಕೂಡೆ ಕೂಡಾನಂದ ಸುಜ್ಞಾನ ಸುಪ್ರಭೆ
ಮೂಡುತಿರ್ದುವು ನಿಜಾತ್ಮನೊಳು ॥ ೪ ॥

ಎರಡು ಕಂಗಳ ಮುಚ್ಚಿ ಸುಜ್ಞಾನವೆಂಬ ದೊ
ಡ್ಡರಿಗಣ್ಣ ತೆಗೆದಾತ್ಮ ಶಿವನು
ಅರಿಕರ್ಮದನುಜರಿಪ್ಪಂಗ ಮೂರೆಂಬ ಮು
ಪ್ಪುರಗಳ ಸುಡುತಿರ್ದನಾಗ ॥ ೫ ॥

ಧ್ಯಾನವೆಂಬುರೆ ಧ್ಯೇಯವೆಂಬ ಧ್ಯಾನಿಪನೆಂಬ
ಧ್ಯಾನದ ಫಲನೆಂಬ ನಾಲ್ಕು
ತಾನೊಬ್ಬನಾಗಿ ತನ್ನೊಳಗೆ ತಾನಿರ್ದನಾ
ತ್ಮಾನಂದನಾ ದಿವ್ಯಯೋಗಿ ॥ ೬ ॥

ನಗುವಂತೆ ಮೊಗವಿರ್ದುದಲುಗದೆ ಮೈಯಿರ್ದು
ದೊಗುವೊಲಿರ್ದುದು ಹೊಸ ಕಾಂತಿ
ಪ್ರಗುಣ ಯೋಗಿಯ ನೋಡಿ ತುಟಿ ಮಿಸುಕದೆ ಮಂದಿ
ತೆಗೆದಿರ್ದುದುರೆ ಬೆರಗಾಗಿ ॥ ೭ ॥

ಬಳಬಳನುದುರುತಿರ್ದುದು ಕರ್ಮ ಚಿತ್ರಭೆ
ಚಳಚಳನೊಳಗೇರುತಿಹುದು
ಎಳನೇಸರೊಳಗೈಕ್ಯವಾದಂತೆ ಪರಮಾತ್ಮ
ಕಳೆಯೊಳಿರ್ದನು ಯೋಗಿರತ್ನ ॥ ೮ ॥

ತೊಳಲಿ ನಾಡೆಲ್ಲವ ತನ್ನಯ ಮನೆಯ ಹೊ
ಕ್ಕಲಸಿಕೆಗಳೆವನಂದದೊಳು
ಇಳೆಯ ಚಿಂತೆಯೊಳಾಡಿದವನೀಶ ತನ್ನಾತ್ಮ
ನೊಳು ನಿಂದು ವಿಶ್ರಮಿಸಿದನು ॥ ೯ ॥

ಎರವೆಂದು ಕಂಡು ಮುನ್ನಾಳ್ದನು ರಾಜ್ಯವ
ಸ್ಥಿರವೆಂದೆ ತನ್ನ ಕಂಡಿರ್ದ
ಎರವೆಂಬುದೆರವಾಯ್ತು ಸ್ಥಿರ ತಾನೆ ಸ್ಥಿರವಾಯ್ತು
ಭರತೇಶ ಕಂಡಲ್ಲಿ ಹುಸಿಯೆ ॥ ೧೦ ॥

ಗುರುಹಂಸನಾಥನೆಂಬಾನೆಂಬ ಸಂಕಲ್ಪ
ವೆರಡಿರುತಿರ್ದುದು ಮತ್ತೆ
ಎರಡಳಿದೊಂದಾಗಿ ನಿರ್ವಿಕಲ್ಪದೊಳು ಭಾ
ಸುರಯೋಗಿ ತನ್ನೊಳಗಿರ್ದ ॥ ೧೧ ॥

ತರುಣಿ ಪುಷ್ಪವ ನೀಡುತಿರೆ ಮಂಚವಲುಗಲಾ
ಕರೆದ ಪೂ ಜಗುಳಲಾರೈದು
ಭರತೇಶಮುನಿಯಾದ ನಲ್ಲಿಯೆಂದಿಂದ್ರನ
ಚ್ಚರಿವಟ್ಟು ನುಡಿದನಂಗನೆಗೆ || ೧೨ ||

ಜಾರಿದುವರುವತ್ತು ಮೂರು ಕರ್ಮಗಳಾಗ
ಮೀರಿದನಂತರಾತ್ಮತೆಯಾ
ತೋರಿತು ಪರಮಾತ್ಮ ಸಂಪತ್ತು ಮುನಿಯಲ್ಲ
ಧೀರನಾಕ್ಷಣ ಜಿನನಾದ || ೧೩ ||

ಕವಿದ ಕರ್ಮದ ಮುಸುಕಳಿಯೆ ಶುದ್ಧಾತ್ಮವ
ಸ್ತುವಿನ ಚಿತ್ಪ್ರಭೆ ಪೊರಪೊಣ್ಮೆ
ರವಿ ಚಂದ್ರಕೋಟಿಪ್ರಕಾಶ ವ್ಮೈಯಿಂದುಕ್ಕಿ
ಭುವನವ ತುಂಬಿತಾಕ್ಷಣವೆ || ೧೪ ||

ವಿಲಸಿತ ಸಿದ್ಧಲೋಕಕೆ ದಾಳಿಯಿಡುವೆನೆಂ
ದೆಳಸಿ ಪ್ರಸ್ಥಾನಗೈದಂತೆ
ನೆಲದಿಂದ ಮೇಲೈದುಸಾವಿರ ಮಾರಿನೊ
ಳ್ನೆಲಸಿದನಾ ಪರಮಾತ್ಮ || ೧೫||

ತೆರವಿಡಿದೊತ್ತಿಲಿರ್ದವರಾಗ ದೂರವಾ
ದರು ಕೂಡೆ ಕೈಗಳ ಮುಗಿದು
ಶಿರವೆತ್ತಿ ನೋಡುತ ಜಯ ಜಯವೆನುತಿರೆ
ಭರತಜಿನೇಂದ್ರ ಮೇಲಿರ್ದ || ೧೬ ||

ಮೇಲಣಿಂದಿಂದ್ರನೆಯ್ತರುತಿರಲಿತ್ತ ಪಾ
ತಾಳದಿಂದುರಗೇಂದ್ರ ತನ್ನ
ಬಾಲೆವೆರಸಿ ಫಣಿಗಣಗೂಡಿ ಸುರವಾದ್ಯ
ಜಾಲದೊಳೆಯ್ತರುತಿರ್ದ || ೧೭ ||

ಸುರಪನು ಫಣಿಪನು ತಮ್ಮ ತಮ್ಮರಸಿಯ
ರ್ವೆರಸಿ ಪಾದಾನತರಾಗಿ
ಪರಿಪರಿಯಲಿ ಸ್ತುತಿಸಿದರು ಪೂಜಿಸಿದರಾ
ದುರಿತನಿರ್ಧೂಮಧಾಮನನು ॥ ೧೮ ॥

ಅರುಹ ನಮ್ಮಂಬಿಕೆಯರಿಗೆ ನಾದುಸಿಯರ್ಗೆ
ಕರುಣಿಸು ದೀಕ್ಷೆಯನೆಂದು
ಒರೆದರ್ಕಕೀರ್ತ್ಯಾದಿರಾಜರೆರಗೆ ಜಿನೇ
ಶ್ವರನೇಳಿರೆನಲೆದ್ದರೊಡನೆ ॥ ೧೯ ॥

ಉರಗೇಂದ್ರನರಸಿಯರಿಂದ್ರನ ಸತಿಯರು
ತೆರೆವಿಡಿದರು ನಲ್ಮೆಯಿಂದ
ಕರೆತಂದು ಮುನಿಗಳಾ ಪುಣ್ಯಕಾಂತೆಯರನಾ
ತೆರೆಯೊಳು ಪುಗಿಸಿದರಾಗ ॥ ೨೦ ॥

ಸುರವಾದ್ಯ ವೊಳಗೆ ತೇಜೋರಾಶಿ ವೊದಲಾದ
ಗುರುಗಳು [illegible]ರ್ದಿ ಸತ್ಕರಿಸೆ
ನಿರುಪಮದೀಕ್ಷೆಯನಾ ಪುಣ್ಯಸತಿಯರೆ
ಲ್ಲರಿಗಿತ್ತನಾ ಪರಂಜ್ಯೋತಿ ॥ ೨೧ ॥

---

# ಚಕ್ರೇಶ ಕೈವಲ್ಯ ಸಂಧಿ

ನಡುವಗಲಲ್ಲಿ ಘಾತಿಯನಿಕ್ಕಿ ಚಕ್ರಿ ಸಂ
ಗಡದವರ್ಗಿತ್ತು ದೀಕ್ಷೆಯನು
ಕಡುಚಿತ್ರ ವೃಷಭಯೋಗಿಗೆ ಘಾತಿಕರ್ಮವಾ
ಕಡೆವಗಲೊಳು ಕೆಟ್ಟುದೊಡನೆ ॥ ೧ ॥

ವಿರಚಿಸಿದರು ಕೂಡೆ ಗಂಧಕುಟಿಯನೊಲ್ದು
ನರಸುರೋರಗರರ್ಚಿಸಿದರು
ಭರತಜಿನನ ಸಾರೆ ವೃಷಭಜಿನೇಶ್ವರ
ನರಮನೆಗಟ್ಟಿದನಾಗ ॥ ೨ ॥

ಆ ರಾತ್ರಿ ಬೆಳಗಿನೊಳಗೆ ಹೋಯ್ತು ರವಿ ಮೂಡ
ಲಾರಾಧ್ಯ ಭರತ ಸರ್ವಜ್ಞ
ದೂರಿತ ನಿರ್ಘಾತಿಗಳನಿಕ್ಕಲನುವಾದ
ವೀರವನೇನ ಬಣ್ಣಿಪೆನು ॥ ೩ ॥

ಗಂಧಕುಟಿಯನುಳಿದನು ದೀಕ್ಷೆಗೊಂಡ ಶ್ರೀ
ಗಂಧವೃಕ್ಷದ ಮೊದಲ್ಗಿಳಿದು
ಬಂಧುರಶಿಲೆಯಲ್ಲಿ ಪಲ್ಯಂಕಯೋಗಾನು
ಬಂಧದಿ ಕುಳಿತನಾ ಸ್ವಾಮಿ ॥ ೪ ॥

ರಾಜಿಪ ಶಿಲೆಯಲ್ಲಿ ಬಾಹ್ಯಾಂಗವಿರ್ದುದು
ತೈಜಸ ಕಾರ್ಮಣಗೂಡಿ
ಮೂಜಗದುದ್ದದೊಳಾತ್ಮ ನಿಂದಿರ್ದನು
ಸೋಜಿಗವಲ್ತೆ ಚಿದ್ಘನತೆ ॥ ೫ ॥

ಎಳೆವಿಸಿಲೆಂತು ಬೆಳ್ದಿಂಗಳೆಂತು ಮಂಜೆಂತು
ಬೆಳುದಿಂಗಳೆಂತೊಮ್ಮೆ ಜಗವ
ಮುಳುಗಿಕೊಂಡಿಪ್ಪುವಂತಾತ್ಮ ಮೂಜಗವನ
ಗ್ಗಳವೆತ್ತು ತುಂಬಿರ್ದನಾಗ ॥ ೬ ॥

ಕೆಡೆದುವೆಪ್ಪತ್ತೆರಡೊಮ್ಮೆ ಕರ್ಮಗಳವ
ರೊಡನೆ ಬಿದ್ದುವು ಪದಿಮೂರು
ಕುಡುಮಿಂಚಿನಂತಂಗ ಬಯಲಾಗೆ ಜಗದ ಮೇ
ಲ್ಗಡೆಗೆ ಲಂಘಿಸಿದನಾ ಸ್ವಾಮಿ ॥ ೭ ॥

ಭರತೇಶನೆಂಬುದು ದೇಹ ಹೋದಂದೆ ಹೋ
ಯ್ತುರರೆ ಸಿದ್ಧರ ಸಮೂಹದೊಳು
ತಿರುಗದ ಹಾದಿಯ ಹೋಗಿ ಮುಕ್ತಿಯೊಳು ನಿಂ
ದಿರುತಿರ್ದನಾ ಸಿದ್ಧನತ್ತ ॥ ೮ ॥

ಶ್ರೀ ಹಂಸ ಹಂಸ ನೋಡೇನೆಂಬೆನೊಡನಿತ್ತ
ಲಾ ಹೊತ್ತಿನೊಳು ಪಂಚಸುತರು
ಮೋಹದ ಘಾತಿಯನಿಕ್ಕಿ ಬಾಂಗಡೆಯೊಳು
ತ್ಸಾಹವೆತ್ತಿರ್ದರಾಶ್ಚರ್ಯ ॥ ೯ ॥

ತಂದೆ ಹೋದಳಲರ್ಕಕೀರ್ತ್ಯಾದಿ ರಾಜರ್ಗೆ
ಸಂದಿಸಿತಿಲ್ಲ ಸೋದರರು
ಒಂದೆ ಬಾರುನ್ನತಿವೆತ್ತುದಕೆದೆಯೊಳಾ
ನಂದಿಸುತಿರ್ದರಚ್ಚರಿಸಿ ॥ ೧೦ ॥

ಭರತಸರ್ವಜ್ಞ ಮುಕ್ತಿಗೆ ಸಂದ ಶಿಲೆಯ ಹ
ತ್ತಿರ ವಜ್ರ ಹೋಮವ ರಚಿಸಿ
ಹರುಷನೃತ್ಯವನಾಡಲರ್ಕಕೀರ್ತ್ಯಾದಿರಾ
ಜರು ನೋಡುತಿರ್ದರರ್ತಿಯೊಳು ॥ ೧೧ ॥

ಭೂವಲಯದ ಭಾರವೆತ್ತ ತೊಂಬತ್ತಾರು
ಸಾವಿರ ಹೆಣ್ಣಾಟವೆತ್ತ
ಕೈವಲ್ಯ ಕ್ಷಣಕಹುದೆತ್ತಲೆಂದುರಗೇಂದ್ರ
ಭಾವಿಸಿ ಪೊಗಳ್ದನಾ ವಿಭುವ || ೧೨ ||

ತನಗೆ ತಾಂ ಗುರುವಾಗಿ ದೀಕ್ಷೆಯನಾಂತು ತ
ನ್ನನು ತಾನೆ ತನ್ನಲ್ಲಿ ನೋಡಿ
ತನುವಳಿದಮೃತವೆಯ್ದಿದನಹೊ ಪೂತು ಬಾ
ಪೆನುತಿರ್ದ ಮುಕುಟವಲ್ಲಾಡೆ || ೧೩ ||

ಮೆಯ್ಯ ದಂಡಿಸಿದನೆ ಭಿಕ್ಷೆಗೆಂದೂರ್ವರ್ಗೆ
ಕೆಯ್ಯೊಡ್ಡಿದನೆ ಚಕ್ರಧರನು
ಉಯ್ಯಲ ತೂಗಿದಂತಮೃತಕೆ ಸಂದ ಬ
ಲ್ಗೆಯ್ಯನಲ್ಲವೆ ಪುರೆಯೆಂದ || ೧೪ ||

ಸಾಕಾಗದದ ಪೇಳುತಿರೆ ಕಲಿಯುಗದ ರ
ತ್ನಾಕರಸಿದ್ಧಗಿಷ್ಟಿರಲಿ
ಸಾಕು ನಿಲ್ಲೆಂದಮರೇಂದ್ರ ವಿನೋದಾರ್ಥ
ವಾಕುದೋರಿದನನಿತರೊಳು || ೧೫ ||

ನಾನೆಷ್ಟರವನಿನ್ನು ರತ್ನಾಕರಸಿದ್ಧ
ತಾನೆಷ್ಟರವನು ಬಣ್ಣಿಪೊಡೆ
ನೀನೆಷ್ಟರವನೆಂದು ನಾಗೇಂದ್ರ ಪೊಗಳ್ದನ
ತ್ಯಾನಂದ ಮಿಗೆ ಚಕ್ರಧರನ || ೧೬ ||

ಅಹುದಲಾ ಗುಣಕೆ ಮತ್ಸರವೆ ಚಕ್ರಿಯವೊಲು
ಬಹುಭಾರವಾಂತಿರ್ದು ಕ್ಷಣಕೆ
ಸಹಜದಿ ಮುಕ್ತರಾದವರಾರು ಸೀನಾಡ
ಬಹುದೆಂದನೊಡನೆ ದೇವೇಂದ್ರ || ೧೭ ||

ಆತನಂದದಿ ಮುಕ್ತಿ ನವಗಾಗಲೆಂದು ತ
ಧ್ಭೂತಳಹೋಮ ಭಸ್ಮವನು
ಪ್ರೀತಿಯಿಂದಮರೇಂದ್ರ ಧರಿಸಿದನುರಗೇಂದ್ರ
ನಾತುರದಿಂದಿಟ್ಟ ತಾನು ॥ ೧೮ ॥

ನೆರೆದರ್ಕ ಕೀರ್ತ್ಯಾದಿರಾಜ ಮುಂತಾದ ಸ
ರ್ವರು ಧರಿಸಿದರಕ್ಕರಿಂದ
ಭರತನಾಥನ ಮೋಕ್ಷಕಲ್ಯಾಣ ಜಗವನು
ದ್ಧರಿಸಿತು ಸುಖವೆತ್ತರೆಲ್ಲ ॥ ೧೯ ॥

ಶ್ರೀ ಜಿನಸಭೆಯ ಬೀಳ್ಕೊಂಡಿತ್ತ ತಮ್ಮೊಡ
ನೋಜೆಯಿಂದೋಲೈಸಿ ಬರ್ಪ
ಪೌಜನೆಲ್ಲವನು ಬೀಳ್ಕೊಟ್ಟರ್ಕಕೀರ್ತ್ಯಾದಿ
ರಾಜರು ಹೊಕ್ಕರು ಪುರವ ॥ ೨೦ ॥

ಬಿಮ್ಮಗಿದ್ದುದು ಪುರ ಪ್ರಜೆಗಳ ಕಂಗಳೊ
ಳುಮ್ಮುತಿರ್ದುದು ಕಣ್ಣ ನೀರು
ಸುಮ್ಮನೆ ನೋಡುತ ಸುಯ್ಯುತ ಸಾರ್ದರು
ತಮ್ಮ ಚಾವಡಿಯನಾ ನೃಪರು ॥ ೨೧ ॥

ತಂದೆ ಕುಳ್ಳಿರುವ ಗದ್ದುಗೆಯ ಕಾಣುತ ಭುಗಿ
ಲೆಂದೆದ್ದುದೆದೆಯಲ್ಲಿ ಶೋಕ
ಬಂದುವು ಕಣ್ಣೀರು ಸ್ವಾಮಿ ಹಾ ಹಾ ಕೆಟ್ಟೆ
ವೆಂದು ಬಾಯ್ಬಿಟ್ಟೊರಲಿದರು ॥ ೨೨ ॥

ಧೈರ್ಯ ಜಾರಿದುದೋಜೆ ಹಾರಿತು ನುಡಿಯ ಚಾ
ತುರ್ಯವೆಂಬುದು ಬಯಲಾಯ್ತು
ಸೂರ್ಯನಿದ್ದವರಿಗಾಗಿರುಳಾಯ್ತು ಪಿತನ ಸೌಂ
ದರ್ಯದ ರೂಪು ತೋರದಿರೆ ॥ ೨೩ ॥

ಆಲಸ್ಯ ನಿನಗಿಲ್ಲ ನಿನ್ನ ಚಾವಡಿಗನು
ಕೂಲಸಂದಣಿ ತಪ್ಪದಿಂದು
ಹಾಳುಸುರಿವುತಿದೆಯೆಂತು ನೋಡುವೆವೆಂದು
ಬಾಲೆಯರಂತೆ ಶೋಕಿಪರು || ೨೪ ||

ಇಂತಳುತಿದ್ದಿದ್ದು ತಮ್ಮ ಬೇಗೆಯ ತಾವೆ
ಸಂತೈಸಿಕೊಂಡರು ಕೂಡೆ
ಅಂತದಕೆಲ್ಲರರ್ತಿಸಿದರು ಭರತಭೂ
ಕಾಂತಪುತ್ರರಿಗದು ಸಹಜ || ೨೫ ||

---

# ಮಂಗಳ ಸಂಧಿ

———

ಮುಕ್ತರೆಲ್ಲರು ಸರಿಯಹುದಾದರೇನಾತ್ಮ
ಶಕ್ತಿಯನರಿದಿಲ್ಲಿ ಮೊದಲು
ವ್ಯಕ್ತಭೋಗದೊಳಿರ್ದು ಕ್ಷಣಕೆ ಮುಕ್ತಿಗೆ ಸಂದ
ಯುಕ್ತಿಗೆನ್ನೆದೆ ಸೂರೆಹೋಯ್ತು || ೧ ||

ಮರೆಯೇಕೆ ಪ್ರಥಮಾನುಯೋಗದಿ ಮುಖ್ಯವ
ಕುರಿತು ಶಲಾಕೆಗೆ ಬಂದ
ಅರವತ್ತುಮೂರರೊಳಾಯ್ದುಕೊಂಡೀ ಜಾಣ
ರೆರೆಯನ ಪೊಗಳ್ದೆನರ್ತಿಯೊಳು || ೨ ||

ಬಗೆ ಮೆಚ್ಚಿ ಹಂಸನಾಥನೊಳಿರ್ದು ಕ್ಷಣಕೆ ಮು
ಕ್ತಿಗೆ ಸಂದ ಭರತಭಾಸ್ಕರನ
ಪೊಗಳದಿರ್ದಾಗ ರತ್ನಾಕರಸಿದ್ಧ ನಾ
ಡುಗನಲ್ಲದೇನಾತ್ಮ ಸುಖಿಯೆ || ೩ ||

ಶೃಂಗಾರಕಾಗಿ ಕಷ್ಟದ ಕಥೆಗೇಳ್ದು ಜ
ನಂಗಳು ಕೆಡಬೇಡವೆಂದು
ಅಂಗಸುಖಿಯ ಮೋಕ್ಷಸುಖಿಯ ಕಾವ್ಯವನಿಷ್ಟು
ಶೃಂಗಾರ ಕಟ್ಟಿ ಪೇಳಿದೆನು || ೪ ||

ಮರುಳರ ಪಾದರಿಯರ ನೀಚಸತಿಯರ
ವಿರಚಿಸಿತಿಲ್ಲ ಸಿಂಗರಕೆ
ಭರತಚಕ್ರಿಯ ಪೇಳ್ದೆನವರ ಪೆಂಡಿರ ಪೇಳ್ದೆ
ಸ್ಮರಿಸಿದರೆಲ್ಲರ್ಗೆ ಪುಣ್ಯ || ೫ ||

ಈ ಕಥೆಯನು ನಾನು ಪೇಳ್ದಾಗ ಧರೆಯೊಳ
ನೇಕರು ಹರುಷವೇರಿದರು
ಪ್ರೋಕರು ನಾಲ್ಕೆಂಟು ಮಂದಿ ಚಿತ್ತದೊಳತಿ
ವ್ಯಾಕುಲಬಟ್ಟರೆಂತೆನಲು ॥ ೬ ॥

ಕೀರ್ತಿಯ ಬಯಸಿ ನಾನುಸಿರಿತಿಲ್ಲೆನಗೆ ಸ
ತ್ಕೀರ್ತಿ ತಾನೆ ಬರುತಿಹುದು
ಕೀರ್ತಿಯ ಬಯಸಿ ಕಣ್ಣುಸುರಾಗಿ ಕೆಲಬರು
ಧೂರ್ತರು ಪೇಚಾಡುತಿಹರು ॥ ೭ ॥

ತೊಡಗುವರ್ತಾವು ಕವಿತ್ವವ ಕಡೆಗದು
ನಡೆಯದು ಕಿವಿಗೆ ಶೋಭಿಸದು
ಬಿಡು ಹೊಸಕವಿತೆಯನೆಂದು ಪೂರ್ವದ ಶಾಸ್ತ್ರ
ಗಡಬಡೆ ಮಾಡುವರೊಡನೆ ॥ ೮ ॥

ಧ್ಯಾನಕೆ ಬೇಸರಾದಾಗ ನನ್ನಾತ್ಮಲೀ
ಲಾನುವೃದ್ಧಿಗೆ ಪೇಳ್ದೆನ್ನೆಸೆ
ನಾನೊಬ್ಬರೊಡನೆ ಮತ್ಸರಕೆ ಪೇಳ್ದವನಲ್ಲ
ಮೋನದೊಳಿಹೆನದು ಸಾಕು ॥ ೯ ॥

ಹಂಸನಾಥನ ಶಕ್ತಿಯೊಳು ಪೇಳ್ದ ಕಾವ್ಯಕೆ
ಸಂಶಯವುಂಟೆ ಲೋಕದೊಳು
ನಾಂ ಸೂಚಿಸಿದ ಮುನ್ನ ಮುನಿಗಳು ನೃಪರು ವಿ
ದ್ವಾಂಸರು ಕೊಂಡೊಯ್ದರೊಲಿದು ॥ ೧೦ ॥

ಗುರುಹಂಸನಾಥನಾಜ್ಞೆಯೊಳು ಸಿದ್ಧಾಂತದ
ತಿರುಳರಿದಾತ್ಮಲೀಲಾರ್ಥ
ಭರತೇಶವೈಭವವೆಂಬ ಕಾವ್ಯವನಿದ
ನೊರೆದೆನು ಸುಖಿಗಳಾಲಿಪುದು ॥ ೧೧ ॥

ಬೇಕಾದರಾಲಿಸುವುದು ಬೇಡವಾಗೆ ಪ
ರಾಕುಮಾಡುವುದೆನಗಲ್ಲಿ
ವ್ಯಾಕುಲವಿಲ್ಲ ಸಂತಸವಿಲ್ಲ ನಾನು ನಿ
ರಾಕಾಂಕ್ಷಿ ಸಾಕದಂತಿರಲಿ || ೧೨ ||

ಈ ಜಿನಕಥೆಯನು ಕೇಳಿದವರ ಪಾಪ
ಬೀಜ ನಿರ್ನಾಶನವಹುದು
ತೇಜವಹುದು ಪುಣ್ಯವಹುದು ಮುಂದೊಲಿದಪ
ರಾಜಿತೇಶ್ವರನ ಕಾಣುವರು || ೧೩ ||

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ
ರಾವೋದವೈದುವರವರು
ನೇಮದಿ ಸುರರಾಗಿ ನಾಳೆ ಶ್ರೀ ಮಂದರ
ಸ್ವಾಮಿಯ ಕಾಣ್ಬರರ್ತಿಯೊಳು ||೧೪ ||

ವೃಷಭಮಾಸದಿ ತೊಡಗಿತು ಕುಂಭಮಾಸ ಸ
ದ್ವಿಷಯದಿ ಕೃತಿ ಪೂರ್ಣವಾಯ್ತು
ವೃಷಭಾಂಕ ಹಂಸನಾಥನೆ ಜಯ ಪರಮ ಪು
ರುಷನೆ ಚಿದಂಬರ ಪುರುಷ || ೧೫ ||

---

ಭರತೇಶವೈಭವ ಸಂಗ್ರಹಂ ಸಂಪೂರ್ಣಂ

# ಶಬ್ದಕೋಶ

(ಸೂಚನೆ: ಮೊದಲನೆಯ ಸಂಖ್ಯೆ ಪುಟಕ್ಕೂ, ಎರಡನೆಯ ಸಂಖ್ಯೆ ಪದ್ಯಕ್ಕೂ, ಸಂಬಂಧಿಸಿದ್ದು.)

## ಅ

| | | |
|---|---|---|
| ಅಕಳಂಕ | ೧೫೫-೧೬ | ಕಳಂಕವಿಲ್ಲದ |
| ಅಕ್ಕರು | ೧೬೬-೨೬ | ಪ್ರೀತಿ |
| ಅಖಂಡಿತ | ೧೦೦-೩೧ | ಸಂಪೂರ್ಣವಾದ |
| ಅಗಲ | ೧೦೦-೩೧ | ತಟ್ಟೆ, ತಳಿಗೆ |
| ಅಗ್ರ | ೩೫೩-೪೩ | ಶ್ರೇಷ್ಠ |
| ಅಗ್ರಣಿ | ೩೪೯-೧೮ | |
| ಅಚ್ಚರಿಸು | ೪೩೩-೧೦ | ಆಶ್ಚರ್ಯಪಡಿಸು |
| ಅಚ್ಚಜೊನ್ನ | ೨೮೭-೨೧ | ಸುಂದರವಾದ ಬೆಳುದಿಂಗಳು |
| ಅಜಡ | ೨೦೯-೧೮ | ಜಡವಲ್ಲದ, ಚಲನೆಯುಳ್ಳ |
| ಅಟ್ಟು | ೩೫೨-೩೯ | ಕಳುಹಿಸು, ದೂಡು |
| ಅಡ್ಡಗೆಡೆ | ೨೨೦-೨೮ | ಅಡ್ಡಬೀಳು, ನಮಸ್ಕರಿಸು |
| ಅಡ್ಡತೆಗೆ | ೧೪೮-೨೨ | ಪಕ್ಕಕ್ಕೆ ತಿರುಗಿಸು, ಓರೆಮಾಡು |
| ಅಡ್ಡಪಿಡ್ಡಗೆ | ೨೬೬-೧೬ | ಅತ್ತ ಇತ್ತ, ಸೊಟ್ಟಪಟ್ಟಗೆ |
| ಅಣೆ | ೨೬೪- ೨ | ಕೀಲಿಸು, ಒತ್ತು |
| ಅಣಿದೋರು | ೩ ೯೯-೧೭ | ಸಿದ್ಧವಾಗಿರು |
| ಅತಿಜೋಲಿ | ೩೮೬-೨೮ | ಹೆಚ್ಚಾದ ಪ್ರೀತಿ |
| ಅಧ್ಯೂಯನ | ೨೫೬- ೪ | (ಅಧ್ಯಯನ) ? ಧ್ಯಾನ, ಅಪೇಕ್ಷೆ ಪ್ರಯತ್ನ |
| ಅನುಮಿಸು | ೨೦-೧೪ | ಊಹಿಸು, ಅನುಮಾನಿಸು |
| ಅನುವಡಿಸು | ೩೩೨-೩೧ | ಅನುವಾದಮಾಡು, ಹೇಳು |
| ಅನುವೆತ್ತ | ೪೦೦- ೯ | ಉಚಿತವಾದ |

| | | |
|---|---|---|
| ಅನ್ನಕ | ೩೫೩-೪೨ | ಅಲ್ಲಿಯವರೆಗೆ |
| ಅಪರ | ೨೩೯-೧೯ | ಪಶ್ಚಿಮ |
| ಅಪವರ್ಗ | ೯೭-೧೬ | ಮೋಕ್ಷ |
| ಅಬ್ಬೆ | ೧- ೩ | ಅಮ್ಮ |
| ಅಭವವಾಸ | ೩೯೪-೧೨ | ಗುಡಿ |
| ಅಮರಿಸು | ೨೬೦- ೮ | ಹೊಂದಿಕೆಗೊಳಿಸು |
| ಅಮ್ಮದು | ೧೨-೧೩ | ಆಗುವುದಿಲ್ಲ |
| ಅಮೃತ | ೪೩೪-೧೪ | ಮೋಕ್ಷ |
| ಅಮೃತಭಾಸ್ಕರ | ೧೧೯-೪೭ | ಚಂದ್ರ |
| ಅರಲಂಬ | ೩೫೪- ೫ | ಪುಷ್ಪಬಾಣ, ಮನ್ಮಥ |
| ಅರಳೆಲೆ | ೨೧೭- ೮ | ಅರಳೀ ಎಲೆ ಆಕಾರದ ಆಭರಣ |
| ಅರಾತಿ | ೨೧೬- ೧ | ಶತ್ರು |
| ಅರಿಕೆ | ೩೩೩-೩೭ | ಪ್ರಸಿದ್ಧಿ |
| ಅರಿದು | ೨೬೬-೧೨ | ಕಷ್ಟ, ಅಸಾಧ್ಯ |
| ಅರೆಗೋಲಿ | ೩೭೭-೧೧ | ? |
| ಅರ್ಘ್ಯ | ೧೫೬-೨೨ | ಪೂಜೆ |
| ಅರ್ತಿ | ೩೩-೨೦ | ಸಂತೋಷ |
| ಅರ್ಭಕ | ೪೨೨-೧೦ | ಮಗು |
| ಅಲಗೆ | ೮೯-೫೮ | ಎಲೆ (ಸ್ತ್ರೀ ಸಂಬೋಧನೆ) |
| ಅಲಸು | ೧೬೪-೧೫ | ಸೋತುಹೋಗು |
| ಅವಗಡ | ೫೭-೨೯ | ಅಪಾಯ |
| ಅಸಿಯುಳು | ೭೬-೪೩ | ಕತ್ತಿಯಂತೆ ಬಳುಕುವ ಹೆಣ್ಣು |
| ಅಸ್ತು | ೧೦- ೩ | ಆಗಲಿ |
| ಅಳಗು | ೨೪೧-೩೧ | ಅಗಳು, ಕಂದಕ |
| ಅಳ್ಕೆ | ೮೮-೫೩ | ಭಯ |
| ಅಳ್ತಿವಡು | ೪೧೦-೧೦ | ಸಂತೋಷಪಡು |
| ಅಂಕ | ೨೧೭- ೭ | ತೊಡೆ |

| | | |
|---|---|---|
| ಅಂಕಮಾಲೆ | ೨೮೨-೧೯ | ಪ್ರಶಸ್ತಿ ಪದ್ಯ |
| ಅಂಕರು | ೩೫೬-೧೨ | ಹೆಸರಾದವರು, ಪ್ರಸಿದ್ಧರು |
| ಅಂಗಪಟ್ಟೆ | ೩೧-೧೦ | ಹೊದೆಯುವ ಪಂಚೆ |
| ಅಂಗುಲಿ | ೨೯೯-೧೦ | ಬೆರಳು |
| ಅಂತರಾಯ | ೧೯೬-೨೧ | ಭೇದ, ಪಕ್ಷಪಾತ |
| ಅಂತರಿಸು | ೭೦- ೬ | ವ್ಯತ್ಯಾಸಮಾಡು |
| ಅಂದಣ | ೨೦೦-೧೫ | ರಥ, ಪಲ್ಲಕ್ಕಿ |
| ಅಂಬರಚರ | ೨೫೬-೧೨ | ದೇವತೆ |
| ಅಂಶು | ೫-೨೭ | ಕಿರಣ |

## ಆ

| | | |
|---|---|---|
| ಆಗಸ | ೨೩೩- ೧ | ಆಕಾಶ |
| ಆಗಾರ | ೪೦೮-೫೬ | ವಾಸಸ್ಥಾನ, ಮನೆ |
| ಆಣ್ಮ | ೭೬-೪೬ | ಗಂಡ |
| ಆದಿವೇವ | ೧೫೬-೧೮ | ಪ್ರಥಮ ತೀರ್ಥಂಕರ |
| ಆದಿವಸ್ತು | ೧೭೫- ೧ | ಮೊದಲ ವಸ್ತು, ದೇವರು |
| ಆನಕ | ೧೧೫-೨೦ | ಭೇರಿ |
| ಆನೀಕ | ೧೫೫-೧೪ | ಸೈನ್ಯ |
| ಆನು | ೪೨೩-೧೭ | ಧರಿಸು, ಸ್ವೀಕರಿಸು |
| ಆಮೋದ | ೪೨೯-೧೪<br>೩೨೨-೧೪ | ಸಂತೋಷ |
| ಆಯತ | ೨೨೮-೨೦ | ಸಂಯಮಪೂರ್ಣ |
| ಆರಯ್ | ೩೨೨-೧೩ | ವಿಚಾರಿಸು |
| ಆಲವಟ್ಟ | ೯೯-೨೮ | ಬೀಸಣಿಗೆ |
| ಆಲಿವರಲ್ | ೨೬೭-೨೧ | ಆಲಿಕಲ್ಲು |
| ಆಲ್ದು | ೧೭೮-೨೩ | ದೃಷ್ಟಿಸಿ |

| | | |
|---|---|---|
| ಆಸರ | ೨೦೪-೩೮ | ಅವಲಂಬನ |
| ಆಸನ್ನ | ೩೬೪-೪೩ | ಸಮೀಪಿಸಿದ |
| ಆಳಿ | ೩೦೪-೨೨ | ಸೇವಕಿ, ಸಖಿ |
| ಆಂಪು | ೪೨೬-೩೦ | ಆತುಕೊ |

## ಇ

| | | |
|---|---|---|
| ಇಕ್ಕು | ೨೧೮-೧೬ | ದಾನಮಾಡು, ಕೊಡು |
| ಇಟ್ಟಾಡು | ೧೭೮-೨೨ | ಚೆಲ್ಲು |
| ಇಡಿಕಿರಿ | ೧೭೯-೨೮ | ಒತ್ತಾಗಿ ಸೇರು |
| ಇಡು | ೨೧೩-೪೪ | ಹೊಡೆ |
| ಇಡುಗುಡ್ಡೆ | ೨೮೧-೧೭ | ಕಿರಿದಾದ ನಡುಗಡ್ಡೆಗಳು |
| ಇಂಗೋಲ | ೩೪೮-೧೪ | ಸಿಹಿಯಾದ ಬಾಣವುಳ್ಳವನು ಮನ್ಮಥ |
| ಇಂಬು | ೧೮೯-೧೨ | ಅವಕಾಶ |

## ಈ

| | | |
|---|---|---|
| ಈರಾರು | ೩೦೧-೫ | ಹನ್ನೆರಡು |

## ಉ

| | | |
|---|---|---|
| ಉಕ್ಕು | ೩೬೧-೪೧ | ಉಬ್ಬು |
| ಉಗ್ಗಡ | ೩೮೩-೧೧ | ಘೋಷಣೆ, ಗಟ್ಟಿಯಾಗಿ ಹೇಳುವುದು |
| ಉಚ್ಚಳಿಸು | ೨೪೧-೧೪ | ಮೇಲೆ ಚಿಮ್ಮು |
| ಉಚ್ಚು | ೧೮೫-೬೦ | ಬಿಚ್ಚು |
| ಉಜ್ಜುಗಿಸು | ೩೯೪-೧೨ | ಪ್ರಾರಂಭಿಸು |
| ಉಡೆ | ೧೯೦-೧೮<br>೨೫೦-೨೦ | ಉಡುವ ಬಟ್ಟೆ |

| | | |
|---|---|---|
| ಉಣ್ಮು | ೩೦೩-೧೬ | ಉಬ್ಬು, ಉಕ್ಕು, ಹೆಚ್ಚಾಗು |
| ಉತ್ತುಂಗ | ೪-೧೯ | ಎತ್ತರ |
| ಉದ್ದವನೇರು | ೨೯೮- ೪ | ಕೊಬ್ಬು |
| ಉದ್ಯನ್ಮೋಕ್ಷಗಾಮಿ | ೩೬೧-೪೫ | ಶ್ರೇಷ್ಠವಾದ ಮೋಕ್ಷದತ್ತ ಹೋಗುತ್ತಿರುವವನು |
| ಉದ್ಯಾಪನೆ | ೪೧೨-೨೭ | ಕೊನೆಯ ಪೂಜೆ |
| ಉಮ್ಮು | ೨೬೬-೧೬ | ಉಬ್ಬು, ಉತ್ಸಾಹಿಸು |
| ಉರುಬು | ೩೩೩-೩೭ | ಮೇಲೆದ್ದು ಕುಣಿ |
| ಉರುವ | ೨೬೭-೨೩ | ಶ್ರೇಷ್ಠವಾದ |
| ಉರ್ವಿ | ೨೬೦- ೯ | ಭೂಮಿ |
| ಉರ್ವಿಂದ | ೧೨೭-೪೦ | ಉಬ್ಬಿನಿಂದ |
| ಉಲುಪೆ | ೨೨೪-೪೮ | ಕಾಣಿಕೆ |
| ಉಂಬಳಿ | ೩೨೯-೧೪ | ಜಹಗೀರು |

## ಊ

| | | |
|---|---|---|
| ಊಡು | ೩೧೦-೨೫ | ಊಟಮಾಡು, ಉಣಿಸು |
| ಊಣೆಯ | ೧೪೨-೫೫ | ನ್ಯೂನತೆ, ಕೊರತೆ, ಕುಂದು |

## ಎ

| | | |
|---|---|---|
| ಎಡೆಗಟ್ಟು | ೨೪೮-೧೧ | ನಿಯಮ, ನಿರ್ಬಂಧ |
| ಎಡೆಗುತ್ತಿ | ೨೦೫-೪೩ | (?) ತೀರದ ಸಮೀಪದಲ್ಲಿ ಅಗಲ ಕಿರಿದಾಗಿ, ನಿಡಿದಾಗಿ ಚಾಚಿದ ದಿಣ್ಣೆ |
| ಎಡೆಯಾಡು | ೨೦೫-೪೩ | ಅಲ್ಲಿ ಇಲ್ಲಿ ಓಡಾಡು |
| ಎಡ್ಡ | ೩೫೩-೪೨ | ಮನೋಹರ |
| ಎರಕ | ೨೫೮-೧೪ | ಪ್ರೀತಿ |
| ಎರಳೆ | ೩೫೬-೧೪ | ಜಿಂಕೆ |

| | | |
|---|---|---|
| ಎರೆಯ | ೭೩-೨೫ | ಪ್ರೀತಿಪಾತ್ರ |
| ಎಳೆವೆಂಗಳು | ೨೩೫-೧೩ | ಯುವತಿಯರು |
| ಎಳೆವರೆಯ | ೩೦೭-೧೧ | ಎಳೆಯ ಪ್ರಾಯ |

## ಏ

| | | |
|---|---|---|
| ಏಕಾರ್ಣವ | ೨೬೮-೨೪ | ಒಂದೇ ಸಮುದ್ರ |
| ಏಣಲೋಚನೆ | ೧೪೧-೫೦ | ಜಿಂಕೆಯ ಕಣ್ಣಿನಂತಹ ಕಣ್ಣುಳ್ಳವಳು |
| ಏಳಿಸು | ೧೦೬-೧೪ | ಹೀಯಾಳಿಸು |
| ಏಳಲೆವೋಗು | ೯೧-೬೬ | ಏಳಲೆ ಬಿಡು, ಬಲಿ |

## ಐ

| | | |
|---|---|---|
| ಐಸೆ | ೩೩೦-೧೮ | ಅಲ್ಲವೆ |

## ಒ

| | | |
|---|---|---|
| ಒಕ್ಕು | ೩೬೫-೧೭ | ಚೆಲ್ಲು |
| ಒಗು | ೩೯೭-೩೧ | ಚೆಲ್ಲು |
| ಒಗುಮಿಗೆ | ೮೩-೧೯ | ಹೆಚ್ಚಾಗಿ |
| ಒಗ್ಗು | ೩೫೪- ೧ | ಒಟ್ಟಿಗೆ ಸೇರು |
| ಒಚ್ಚತಾಗಿರು | ೩೭೭- ೬ | ಹೊಂದಿಕೆಯಾಗು, ಸಮ್ಮೇಳನಗೊಳ್ಳು |
| ಒಚ್ಚೆಯ | ೩೩೪-೪೩ | ಅಪಮಾನ |
| ಒಟ್ಟೈಸು | ೨೮೪- ೨ | ಗುಂಪುಗೂಡು |
| ಒಡ್ಡು | ೨೬೬-೧೬ | ಗುಂಪು |

ಒತ್ತಿನುಡಿ ೭೧-೧೬ ಚುಚ್ಚಿ ಮಾತನಾಡು
ಒಪ್ಪಚ್ಚಿ ೨೦೭-೩೦ ಸ್ವಲ್ಪ
ಒಬ್ಬುಳಿ ೨೭೩- ೭ ಗುಂಪು
ಒಸಗೆ ೨೩೩- ೩ ಸಂತೋಷ ಸಮಾಚಾರ
ಒಸೆಯೆ ೩೩೦-೩೭ ಸಂತೋಷಗೊಳ್ಳಲು
ಒಳುನುಡಿ ೨೧೯- ೧ ಒಳ್ಳೆಯ ಮಾತು
ಒಂದಿಸು ೨೫೪-೪೬ ಸೇರಿಸು

## ಓ

ಓತು ೩೬೧-೪೬ ಪ್ರೀತಿಸಿ
ಓಪ ೨೦೩,೩೫ ಪ್ರೀತಿಪಾತ್ರ
ಓವರಿ ೨೮೦-೨೫ ಕೋಣೆ, ಗುಹೆ

## ಕ

ಕಜ್ಜ ೩೮೪-೧೩ ಕೆಲಸ, (ಕಾರ್ಯ ತ್ಸ)
ಕಟಕ ೨೦೧-೨೧ ಸೈನ್ಯ, (ರಾಜಧಾನಿ)
ಕಟಸೂತ್ರ ೪೪-೧೬ ಉಡುದಾರ, ಡಾಬು
ಕಟ್ಟಕ್ಕರು ೩೦೮-೧೨ ಹೆಚ್ಚಾದ ಪ್ರೀತಿ
ಕಟ್ಟಣೆ ೧೦೫- ೭ ಕಟ್ಟಪ್ಪಣೆ, ಕಟ್ಟಳೆ
ಕಟ್ಟಳಲು ೨೦೪-೪೧ ಹೆಚ್ಚಾದ ದುಃಖ
ಕಟ್ಟಾಯ ೧೧೭-೩೧ ಕಠಿಣವಾದ ಆಜ್ಞೆ
ಕಟ್ಟಗೆಕಾರ ೧೧೪-೧೫ ಹೊಗಳುಭಟ್ಟ
ಕಡುಗಿ ೨೪೪- ೮ ಉತ್ಸಾಹಗೊಂಡು
ಕಡುಪು ೨೪೫-೧೨ ಶೌರ್ಯ, ಧೈರ್ಯ, ಉತ್ಸಾಹ
ಕಣ್ಚಲ್ಲ ೨೫೫-೫೦ ಕಣ್ಣಿನ ಚಾಪಲ್ಯ

| | | |
|---|---|---|
| ಕಣ್ಣಿ | ೩೫೬-೧೪ | ದನಗಳ ಕೊರಳಿಗೆ ಹಾಕುವ ಹಗ್ಗ |
| ಕಣ್ಣೊದ್ಳಲು | ೧೨೬-೩೩ | ಕಣ್ಣಿನ ಓಡಾಟ, ಕಣ್ಣಿನ ಓಟ |
| ಕತ್ತರ | ೧೧೫-೧೮ | ಮದ್ದಲೆ ಬಾರಿಸುವ ಚದುರು |
| ಕದುಬು (ಕದುಂಬು) | ೨೬೫- ೭ | ಇಕ್ಕಟ್ಟಾಗಿ |
| ಕನ್ನಡಹಕ್ಕಿ | ೬೬-೨೧ | ಗಿಳಿ |
| ಕನ್ನಡಿಸು | ೧೦೪- ೩ | ಪ್ರತಿಬಿಂಬಿಸು |
| ಕಬ್ಬಿಗ, ಕಬ್ಬ | ೧- ೩ | ಕವಿ, ಕಾವ್ಯ (ತ್ಸ) |
| ಕಮ್ಮಂಗಣೆಯ | ೩೩೭-೧೧ | ಮನ್ಮಥ |
| ಕಮ್ಮನೆ | ೧೫-೩೪ | ಸುವಾಸನೆಯಾಗಿ, ರುಚಿಯಾಗಿ |
| ಕರಡಿಗೆ | ೧೧೩- ೬ | ಭರಣಿ |
| ಕರುಮಾಡ | ೩೮೯-೨೫ | ಮಹಡಿ |
| ಕರ್ಣಾಟಿಸು | ೧೧೨- ೫ | ಕಿವಿಯನ್ನು ಹೊಗಿಸು |
| ಕಲಾಪ | ೨೧೨-೩೭ | ಸಮೂಹ, ನವಿಲಿನ ಗರಿ |
| ಕಲಿಲಾರಿ | ೧೯೩-೧೧ | ಕಳವಳ ವಿನಾಶಕ, ದೇವರು, ಜಿನ |
| ಕವುದಿ | ೩೩೩-೩೬ | ತೇಪೆಯ ಬಟ್ಟೆ, ಬಟ್ಟೆ |
| ಕವ್ವರಿಸು | ೧೨೫-೨೭ | ಕಾತರಗೊಳ್ಳು |
| ಕಷಾಯ | ೩೭೭-೧೦ | ವ್ಯಥೆ |
| ಕಳ | ೨೮೧-೧೪ | ಕಣ, ರಂಗ |
| ಕಲಕಂಠ | ೧೦೬-೧೩ | ಕೋಗಿಲೆ |
| ಕಳಾಸ | ೧೧೫-೧೮ | ಮದ್ದಳೆ ಬಾರಿಸುವ ಜಾಣ |
| ಕಾದಲೆ | ೧೩೮-೩೪ | ಪ್ರಿಯೆ |
| ಕಾಹು (ಪು) | ೧೮೯-೧೬ | ರಕ್ಷಣೆ |
| ಕಾರ್ಗಾಲ | ೧೯೯-೧೧ | ಮಳೆಗಾಲ |
| ಕಾಲ್ದುಡುಕು | ೧೦೧-೩೮ | ಅಡ್ಡವಾಗು |
| ಕಾಸರಕ | ೨೯೫-೨೧ | ಒಂದು ಜಾತಿಯ ಮರ |
| ಕಾಳಂಜಿ | ೪೧- ೪ | ಪನ್ನೀರುದಾನಿ |

| | | |
|---|---|---|
| ಕಿವಿಗಚ್ಚು | ೫೩- ೧ | ಗುಟ್ಟಾಗಿ ಕೇಳು |
| ಕೀರ | ೫೮-೩೫ | ಗಿಳಿ |
| ಕೀಲಿಸು | ೧೫೪- ೬ | ಸೇರಿಸು, ನೆಡು |
| ಕುಡುಹು | ೮-೪೭ | ವಾದ್ಯವನ್ನು ನುಡಿಸುವ ಕೋಲು, ಕೋಣ |
| ಕುಡ್ಯ | ೧೮೦-೩೫ | ಗೋಡೆ |
| ಕುಪ್ಪಿಗೆ | ೫೯-೪೧ | ಸಣ್ಣ ಡಬ್ಬಿ, ಭರಣಿ |
| ಕುರು | ೨೦೧-೨೨ | ಚಿಕ್ಕ (ಮೋಟಾದ) |
| ಕುಲಿಶ | ೩೫೪- ೩ | ವಜ್ರಾಯುಧ |
| ಕೂಪ | ೧೮೯-೧೬ | ಕೂರ್ಪ, ಪ್ರೇಮಾಸ್ಪದರಾದ |
| ಕೂರ್ | ೧೦೨-೪೩ | ಹರಿತ (ಸ್ನೇಹ) |
| ಕೂರ್ಮ | ೨೦೮-೧೨ | ಆಮೆ |
| ಕೈಗಟ್ಟು | ೩೭-೪೨ | ನಮಸ್ಕರಿಸು |
| ಕೈಲಾಗು | ೯೯-೨೬ | ಕೆಯ್ ಕುಲುಕುವುದು |
| ಕೊರ್ವು | ೩೦೬- ೫ | ಕೊಬ್ಬು |
| ಕೊಲ್ಲಣಿ | ೧೧೫-೧೯ | ಆಟ, ವಿನೋದ |
| ಕೊಲ್ಲೈಸು | ೨೧೨-೪೩ | ಬಗ್ಗಿಸು |
| ಕೋವಿದ | ೮೯-೫೬ | ಜಾಣ |
| ಕೌಳಿಕ | ೭೫-೪೦ | ಮೋಸ |
| ಕಂಚುಮಿಂಚು | ೧೨೪-೧೯ | ತೋರಿ ಮಾಯವಾಗು |
| ಕಂತು | ೩೪೦-೨೯ | ಮನ್ಮಥ |
| ಕಂದ | ೨೪೬-೧೯ | ಕುತ್ತಿಗೆಯ ಕೆಳಭಾಗ |
| ಕಂಬಿ | ೧೭೩-೬೯ | ಉತ್ತ್ರೆ |
| ಕಾಂಡಪಟ | ೧೨೪-೨೧ | ಅಂತರ್ಪಟ, ತೆರೆ |
| ಕೆಂಗೂಳು | ೧೮೫-೬೨ | ಕೆಂಪಾದ ಅನ್ನ |
| ಕೆಂಬಜ್ಜೆ | ೩೫೯-೩೫ | ಕೆಂಪಾದ ಹೆಜ್ಜೆ, ಪಾದ |

x

| | | |
|---|---|---|
| ಕ್ರಮ | ೨೫-೪೭ | ಪಾದ |

## ಖ

| | | |
|---|---|---|
| ಖೋಡಿ | ೩೪೭-೧೧ | ಕೊರತೆ |
| ಖಂಡೆಯ | ೫-೨೬ | ಕತ್ತಿ |
| ಖೇಂದ್ರ | ೧೭೮-೧೯ | ಆಕಾಶಕ್ಕೆ ಒಡೆಯ, ಗಂಧರ್ವ |

## ಗ

| | | |
|---|---|---|
| ಗದಕ | ೧೦೭-೨೪ | ಕೃತಕ (ತ್ಸ) |
| ಗನ್ನ | ೨೮೬-೧೬ | ಮೋಸ |
| ಗರಗರಿಕೆ | ೪೮-೪೩ | ಸ್ವಚ್ಛತೆ |
| ಗರುವಿಕೆ | ೨೭೬-೨೭ | ಹಿರಿಯತನ |
| ಗಳಗಳಿಸು | ೨೫೨-೩೩ | ಗಲಗಲ ಶಬ್ದ ಮಾಡು |
| ಗಳದೌತಗಿರಿ | ೨೪೩- ೨ | ವಿಜಯಾರ್ಧಪರ್ವತ |
| ಗಳಗೆ | ೧೬೦-೪೫ | ಬುಟ್ಟಿ |
| ಗಾಜಗೋಜು | ೧೬೦-೪೩ | ಬಣ್ಣಬಣ್ಣದ ಗಾಜಿನ ಮಣಿಗಳನ್ನು ಗುಂಪುಗುಂಪಾಗಿ ಎರಚಿದಂತೆ |
| ಗಾಡಿ | ೭೩-೨೮ | ಠೀವಿ |
| ಗಾವಿಲ | ೨೨೧-೩೦ | ಮೂಢ |
| ಗಾಳಿವಟ್ಟೆ | ೩೮೬-೨೬ | (ಗಾಳಿಯ+ಬಟ್ಟೆ) ಆಕಾಶ |
| ಗೀರ್ವಾಣ | ೪೦೦-೧೦ | ಸಂಸ್ಕೃತ |
| ಗುಡಿ | ೧೭೭-೧೨ | ಬಾವುಟ |
| ಗುಡಿಕೇತು | ೩೧೪-೧೨ | ಕಟ್ಟಿಗೆಗೆ ಕಟ್ಟಿರುವ ಬಾವುಟ |
| ಗುಲ್ಫ | ೩೭-೪೩ | ಕಾಲಿನ ಹರಡು |
| ಗುಸುಟು | ೪೩-೧೩ | ಗುಟ್ಟು |
| ಗೃಹ ಜಾಲ | ೨೨೫- ೫ | ಮನೆಗಳ ಸಾಲು |

| | | |
|---|---|---|
| ಗೇಣ್ದೋರು | ೧೫೦-೩೦ | ಗೇಣು ದೂರದಲ್ಲಿರುವಂತೆ ತೋರು, ಹತ್ತಿರದಲ್ಲಿರುವಂತೆ ತೋರು |
| ಗಂಧೆ | ೭೫-೩೯ | ತುರಿ, ತಿಂಡಿ |
| ಗಂಧಕುಟಿ | ೩೮೨- ೧ | ಗಂಧದ ಗುಡಿ |

## ಘ

| | | |
|---|---|---|
| ಘಟ | ೨೧೦-೨೬ | ಗಡಿಗೆ |
| ಘಟಿತ | ೩೪೬- ೧ | ಉಂಟಾದ, ಸೇರಿಕೊಂಡ |
| ಘನಮಾರ್ಗ | ೩೭೭- ೮ | ಆಕಾಶಮಾರ್ಗ |
| ಘೂರ್ಣಿಸು | ೮೦- ೧ | ಗರ್ಜಿಸು |
| ಘೀಳಿಡು | ೨೪೫-೧೫ | ಗರ್ಜಿಸು |

## ಚ

| | | |
|---|---|---|
| ಚಚ್ಚರ | ೩೧೪-೧೪ | ಬೇಗ, ಎಚ್ಚರಿಕೆ |
| ಚಡಾಳಿಸು | ೨೭೦-೩೯ | ಗದರಿಸು, ಮೇಲೆ ಬೀಳು |
| ಚಪ್ಪರಿದಾಡು | ೪೦೫-೪೦ | ಬಾಯಿ ಚಪ್ಪರಿಸುತ್ತಾ ಆನಂದ ಪಡು |
| ಚಪ್ಪಳಿಸು | ೧೪೨-೫೪ | ದುಃಖ ಸೂಚಕ ಲೊಚಲೊಚ ಧ್ವನಿ ಮಾಡು |
| ಚಮ್ಮಾವುಗೆ | ೩೨೧-೧೧ | ಚರ್ಮಪಾದುಕಾ (ತ್ಸ) ಚರ್ಮದ ಜೋಡು |
| ಚರು | ೩೭೫-೨೪ | ಆಹುತಿಯ ಅನ್ನ |
| ಚಳಯು | ೯೬- ೬ | ನೀರು ಚಿಮುಕಿಸುವುದು |
| ಚಾಗಿ | ೧೪೪- ೫ | ತ್ಯಾಗಿ (ಸಂ) |
| ಚಾಟುಕಾತಿ | ೪೮-೪೪ | ಮೋಹಕಳಾದ ಹೆಣ್ಣು |

| | | |
|---|---|---|
| ಚಾರಿವರಿ | ೧೦೭-೩೫ | ಜಾಣ್ಮೆಯಿಂದ ಓಡಾಡು |
| ಚಾಳಿಸು | ೬೯- ೪ | ಸೋಲಿಸು, ಮೋಸ ಮಾಡು |
| ಚಾಳಿಯ | ೧೧೮-೩೭ | ಕುಣಿಯುತ್ತಾ ಇಡುವ ಹೆಜ್ಜೆ, ಗತಿ ಲಾಘವ |
| ಚೀನಾಂಬರ | ೧೫೩- ೩ | ರೇಷ್ಮೆಯ ಬಟ್ಟೆ |
| ಚುನ್ನ | ೨೯೫-೨೦ | ಮೋಸದ ಮಾತು |
| ಚುಮ್ಮುರಿ | ೪-೨೩ | ಸುತ್ತಿ ಕಟ್ಟಿದ |
| ಚೌಕ | ೩೪-೨೮ | ಕೊಠಡಿ |
| ಚೌಕುಳಿ | ೧೧೦-೩೬ | ಕಿವಿಯ ಆಭರಣ |
| ಚಂಪೆ | ೧೨೭-೩೭ | ಸಂಗೀತ ಸಾಧನ |
| ಚಂಬಕವರೆ | ೨೬೯-೩೧ | ವಾದನ ಸಾಮಗ್ರಿ |
| ಚಾಂಗು | ೨೭೮-೩೬ | (ಕೊಂಡಾಟದ ನುಡಿ), ಭಲೆ |
| ಚಾಂದಸಿಕೆ (ಛಾಂದಸಿಕೆ) | ೪೮-೪೪ | ವಿಳಂಬ, ನಿಧಾನವಾಗಿ ಕೆಲಸ ಮಾಡು |

## ಛ

| | | |
|---|---|---|
| ಛದ್ಮ | ೧೫೦-೩೧ | ಮೋಸ |
| ಛಪ್ಪನ್ನ | ೩೬೩- ೨ | ಐವತ್ತಾರು |
| ಛವಿ | ೩-೧೭ | ಕಾಂತಿ |

## ಜ

| | | |
|---|---|---|
| ಜಕ್ಕುಲಿಸು | ೨೫೨-೩೩ | ಬಿಕ್ಕಳಿಸುತ್ತಾ ಮಾತನಾಡು |
| ಜತನೆ | ೧೮೨- ೨ | ಜೋಕೆ |
| ಜಮ್ಮುದಟ್ಟಿಸು | ೧೭೭-೧೩ | ಜುಂ ಎನ್ನುವಂತೆ ಸಂತೋಷಗೊಳಿಸು |
| ಜರತಿ | ೩೮೭-೩೨ | ಮುದುಕಿ |

ಜಸ ೩೫೮-೨೪ ಯಶಸ್ಸು (ತ್ಸ) ಕೀರ್ತಿ
ಜಾಗರ ೧೬೧-೫೦ ನಿದ್ರೆ ಕೆಡುವುದು
ಜಾನು ೨೦-೧೨ ತೊಡೆ
ಜಾಳಿಗೆ ೨೨೧-೩೪ ಸಮೂಹ, ಚೀಲ, ಜಾಲಂದ್ರ
ಜೂಟು ೧೦೨-೪೫ ಹುಡುಗಾಟ, ಸುಳ್ಳು
ಜೇವಡೆ ೨೦೯-೨೩ ಟಂಕಾರ ಮಾಡು
ಜೋಲಿ ೭೮-೫೭ ತೂಗಾಟ

## ಝ

ಝುಲ್ಲಿ ೯೪- ೩ ಕುಚ್ಚು
ಝುಂಕಣೆ (ಝುಂಕೆ) ೫೧೫-೧೯ ಗದರಿಕೆ

## ಟ

ಟವಣೆ ೯೯-೪೮ ಹೊಂದಿಕೆ
ಟಿಕ್ಕೆಯು (ಟಿಕ್ಕೆ) ೧೯೮- ೩ ವಾದ್ಯ ವಿಶೇಷ
ಟೌಳಿ ೬೩- ೨ ಮೋಸ

## ಡ

ಡಾಳ ೫-೨೮ ಹೊಳಪು
ಡಂಗರಿಸು ೩೧೩- ೯ ಎಲ್ಲರಿಗೂ ಸಾರಿ ಹೇಳು

## ತ

ತಕ್ಕೈಸು ೧೭೦-೪೯ ಸಮಾಧಾನ ಮಾಡು

ತಗಹಿಕ್ಕು ೨೬೮-೨೮ ಅಡ್ಡಿಪಡಿಸು,

ತರಲ ೧೨೩-೧೪ ಚಂಚಲ

ತರಹರಿಸು ೩೧೨- ೫ ಸಹಿಸು

ತಳರ್ ೧೯೬-೧೯ ಹೊರಡು

ತಳಹೊಳಗೊಳ್ಳು ೩೦೭-೧೧ ಗಾಬರಿಯಿಂದ ದಿಕ್ಕು ತೋಚದಂತಾಗು

ತಳಿ ೧೨೩-೧೬ ಬಳಿ, ಲೇಪಿಸು

ತಳ್ಳಂಕಗೊಳ್ಳು ೨೪೬-೧೮ ತಲ್ಲಣಗೊಳ್ಳು, ಭೀತಿಗೊಳ್ಳು

ತಳ್ಳಿ ೩೮೬-೨೪ ತಂಟೆ

ತಾಡ್ಯಮಾನ ೧೭೦-೩೫ ಬಾರಿಸಲ್ಪಟ್ಟ

ತಾರಾದ್ರಿ ೩೦೩-೧೩ ಬೆಳ್ಳಿಯ ಬೆಟ್ಟ

ತಾರೆ ೧೨೫-೨೬ ನಕ್ಷತ್ರ

ತಾರ್ಗೊಳ್ ೪೧೨-೨೩ ತಾರಸ್ವರದಲ್ಲಿ

ತಾವರೆಯೋಪ ೩೪೦-೨೬ ಕಮಲದ ಪ್ರಿಯ, ಸೂರ್ಯ

ತಿಟ್ಟ ೧೯೬-೧೮ ಉಪಾಯ

ತಿಟ್ಟವಿಕ್ಕು ೧೧೭-೩೧ ಚಿತ್ರವನ್ನು ಬರೆ

ತಿತ್ತಿ ೧೨೭-೩೮ ಚೀಲ

ತುಡುಮು ೧೧೫-೨೦ ಟುಮುಕಿ, ಸಣ್ಣ ನಗಾರಿ

ತುಪ್ಪುಳು ೪೦೫-೪೦ ತುಪ್ಪಟದಂತೆ ಕಪ್ಪಾದ

ತುರಿಹ ೩೩೬- ೫ ಆತುರ

ತುರುಗು ೫೬-೩೬ ತುಂಬು

ತೂಪಿರಿ ೧೭೮- ೬ ನೆತ್ತಿಯ ಮೇಲೆ ಊದು, ಆಘ್ರಾಣಿಸು

ತೂಳವೇಳು ೨೧೧-೩೩ ಅಟ್ಟಿಸಿಕೊಂಡು ಬಾ

ತೆಗಹು ೨೬೮-೨೮ ತೆರಪು, ಅವಕಾಶ

ತೆಟ್ಟ ೧೭೮-೧೮ ಚಪ್ಪಟೆಯಾದ ಪ್ರದೇಶ

ತೆತ್ತಿಸು ೫೯-೩೯ ಸೇರಿಸು

| | | |
|---|---|---|
| ತೆಮಳ್ | ೩೧೫-೧೯ | ಓಟ್ಟೊಟ್ಟಿಗೆ ಹೊಡದಟ್ಟು |
| ತೊಡಹಗಾರಿಕೆ | ೧೮೪-೫೮ | ಯುದ್ಧಮಾಡುವುದರಲ್ಲಿ ಜಾಣ್ಮೆ |
| ತೋಯಧಿ | ೨೧೫-೫೪ | ಸಮುದ್ರ (ತೋಯ–ನೀರು) |
| ತೋರ | ೧೫೮-೩೮ | ದೊಡ್ಡದಾದ |
| ತೋಳ್ವಲ | ೩೫೯-೨೭ | (ತೋಳ್+ಬಲ) ಭುಜಬಲ |
| ತಂತ್ರಾಂಗ | ೭೨-೨೦ | ಉಪಾಯದ ಮಾರ್ಗ |
| ತಂಬಟ | ೨೬೯-೩೧ | ತಮಟೆ |
| ತೂಂತಿಡು | ೨೦೫-೪೪ | ತುಂತುರುಗಳನ್ನು ಎರಚು |
| ತೂಂಬು | ೨೪೫-೧೬ | ತೂಬು |
| ತೊಂಡರು | ೨೪೮- ೯ | ಚಾಡಿಕೋರರು |
| ತೊಂಡಲಿಪಿ | ೨೮೨-೨೨ | ಅಯೋಗ್ಯವಾದ ಬರವಣಿಗೆ |
| ತೊಂಡಿಲು | ೨೯೦- ೬ | ಕುಚ್ಚು |

## ದ

| | | |
|---|---|---|
| ದರ್ಪಕ | ೩೬೪- ೯ | ಮನ್ಮಥ |
| ದಳವೇರು | ೧೪೧-೪೮ | ಸಂತೋಷದಿಂದ ಉಬ್ಬು |
| ದಿಬ್ಬೆ | ೪೭-೩೮ | ದಿವ್ಯ, ಸತ್ಯ ಪರೀಕ್ಷೆಗಾಗಿ ನಡೆಸುವ ಬೆಂಕಿ ಹಿಡಿಯುವುದೇ ಮೊದಲಾದ ಪವಾಡ |
| ದೀಕ್ಷಾಗಮ | ೩೦೭-೧೦ | ದೀಕ್ಷೆಗೆ ಸಂಬಂಧಿಸಿದ ಶಾಸ್ತ್ರ |
| ದೀವ | ೬೦-೪೫ | ದ್ವೀಪ, ನಡುಗುಡ್ಡೆ |
| ದುಗ್ಗ | ೨೦೫-೪೩ | ಹಡಗು |
| ದುಗುಲ | ೭೮-೫೫ | ದುಕೂಲ (ತ್ಸ) ಬಟ್ಟೆ |
| ದುರ್ವಹ | ೨೬೩-೨೪ | ಕೆಟ್ಟ |
| ದೂರಿತ | ೪೩೨- ೩ | ದೂರ ಮಾಡಲ್ಪಟ್ಟ |
| ದೂರಿಸು (ದೂನಿಸು) | ೩೪೮-೧೩ | ಚಿಂತಿಸು, ವ್ಯಥೆಪಡು |

| | | |
|---|---|---|
| ದೂವಟ | ೩೧೬-೨೪ | ದುಪ್ಪಟ, ದುಪಟ |
| ದೇವಾಂಗ | ೯-೫೨ | ರೇಷ್ಮೆ ವಸ್ತ್ರ |
| ದೇಹಾರ | ೨೯೨- ೧ | ವಾಸಯೋಗ್ಯವಾದ ಪಟಗೃಹ (?) |
| ದಂಡಿಗೆ | ೪೯-೫೧ | ವೀಣೆ |
| ದಂದುಗ | ೧೬೬-೨೪ | ತೊಂದರೆ |
| ದುಂದುಭಿ | ೩೮೫-೨೦ | ನಗಾರಿ |
| ದ್ಯುಮಣಿ | ೨೫-೪೨ | ಸೂರ್ಯ |

## ಧ

| | | |
|---|---|---|
| ಧಾರೆಕೋರೆ | ೨೪೮-೧೯ | ಉಡಿಗೆ ತೊಡಿಗೆ, ಧರಿಸಿರುವ ಕತ್ತಿ, ಮುಖದ ಮೀಸೆ ಇವುಗಳೆಲ್ಲದರಿಂದ ಉಂಟಾಗುವ ಸಾಮೂಹಿಕ ಭಾವ ಭಂಗಿ |

## ನ

| | | |
|---|---|---|
| ನಚ್ಚು | ೩೩೪-೪೩ | ನಂಬು |
| ನಟ್ಟುವ | ೧೧೬-೨೪ | ನೃತ್ಯವನ್ನು ಕಲಿಸುವವನು |
| ನನೆಕೊನೆವೋಗು | ೧೭೬- ೯ | ಮೊಗ್ಗು, ಚಿಗುರುಗಳಿಂದ ತುಂಬು, ರೋಮಾಂಚಗೊಳ್ಳು |
| ನಯಕಾರ | ೧೨೨- ೭ | ನೀತಿಯನ್ನು ತಿಳಿದವನು |
| ನರುಗಬ್ಬು | ೮-೪೫ | ಸುವಾಸನೆಯಿಂದ ಕೂಡಿದ ಕಬ್ಬು |
| ನರುಗೋಲ | ೩೭೩- ೧ | ಮನ್ಮಥ |
| ನರುಗಂಪು | ೪೦೫-೩೯ | ಸುವಾಸನೆ |
| ನವ್ಯ ದೀಕ್ಷಾಂಗಿ | ೩೮೫-೨೨ | ಹೊಸದಾಗಿ ದೀಕ್ಷೆಯನ್ನು ವಹಿಸಿದ ಹೆಂಗಸು |
| ನಾಡುಗ | ೩೪೪-೫೧ | ಸಾಮಾನ್ಯ ಮನುಷ್ಯ |
| ನಾಳಿನವನು | ೨೨೨-೩೭ | ಉತ್ತರಾಧಿಕಾರಿ ( ? ) |
| ನಿಕಾಯ | ೪೧೯- ೫ | } ಸಮೂಹ |
| ನಿಕುರುಂಬ | ೩೯೨- ೩ | |

| | | |
|---|---|---|
| ನಿಗಠಣೆ | ೯೦-೯೨ | ಅಟ್ಟಹಾಸ |
| ನಿಚಿತ | ೨-೧೦ | ನಿಶ್ಚಯಿಸಲ್ಪಟ್ಟ |
| ನಿಚ್ಚ | ೧೮೧-೩೮ | ಪ್ರತಿದಿನ |
| ನಿಜದೋರು | ೨೫೬- ೩ | ಸತ್ಯವನ್ನು ತಿಳಿಸು |
| ನಿಟ್ಟಾಯತ | ೨೬೫- ೬ | (ನಿಡು + ಆಯತ) ಹೆಚ್ಚು ವಿಸ್ತಾರವಾದ |
| ನಿಟಲ | ೩೧೩-೧೦ | ಹಣೆ |
| ನಿಧಾನ | ೨೩-೩೧ | ನಿಧಿ |
| ನಿಯತ | ೧೯೭-೨೬ | ನಿಶ್ಚಿತವಾದ |
| ನಿರಾಕುಲ | ೪೧೪- ೩ | ವ್ಯಥೆಯಿಲ್ಲದ |
| ನಿರಾಮಯ | ೩೮೯- ೬ | ರೋಗವಿಲ್ಲದ |
| ನಿರುತ | ೩೮೦-೨೬ | ಯಾವಾಗಲೂ |
| ನಿರಂಗ | ೫೯-೪೧ | ? |
| ನಿಸ್ಸಾಳ | ೧೯೪-೧೦ | ಭೇರಿ |
| ನಿಹಾರ | ೩-೧೪ | ಮಲವಿಸರ್ಜನೆ |
| ನೀಟ | ೪೮-೪೪ | ನೇರವಾಗಿ |
| ನೀರಾಜನ | ೨೫೨-೩೫ | ಮಂಗಳಾರತಿ |
| ನೀರ | ೨೦೮-೧೬ | ಸುಂದರ |
| ನೀರೇಜಧೂಳಿ | ೧೬೦-೪೩ | ಕಮಲದ ಪರಾಗ |
| ನೀಲಾಂಬುಜ | ೬-೩೪ | ಕನ್ನೈದಿಲೆ |
| ನುಡಿವಕ್ಕಿ | ೭೭-೪೮ | ಗಿಳಿ |
| ನುಣ್ಚರ | ೨೫೫-೫೦ | ಇಂಪಾದ ಧ್ವನಿ |
| ನೆಗಳು | ೧೯೯-೧೦ | ಮೊಸಳೆ |
| ನೆಮ್ಮು | ೧೩೫-೧೪ | ಒರಗು |
| ನೆರವಿ | ೧೦- ೧ | ಗುಂಪು |
| ನೇಜಯ | ೧೯೮- ೩ | ಬಾಕು, ಸಣ್ಣ ಕತ್ತಿ |
| ನೊಸಲಿಡು | ೩೧೭-೩೨ | ನಮಸ್ಕರಿಸು |

| | | |
|---|---|---|
| ನೋಂಪಿ | ೫೪-೧೦ | ವ್ರತ |
| ನಂದನ | ೩೦೬- ೪ | ಮಗ |
| ನಂಗಲ್ಲು | ೨೦೯-೨೧ | ಲಂಗರು |
| ನೋಂತರು | ೪೦೧-೧೩ | ವ್ರತಮಾಡಿದರು |
| ನ್ಯಾಸ | ೪೦೦-೧೦ | ಉಪನ್ಯಾಸ |

## ಪ

| | | |
|---|---|---|
| ಪಗರಣೆ | ೯೦-೬೨ | ಅಹಂಕಾರ |
| ಪಚ್ಚೆವಿಲ್ಲಣ್ಣ | ೩೬೩-೩೦ | ಮನ್ಮಥ |
| ಪಟಹ | ೧೯೪-೧೦ | ಭೇರಿ |
| ಪಟುಮತಿ | ೩೧೩-೧೦ | ಶಕ್ತನಾದ, ಅತಿಸೂಕ್ಷ್ಮವಾದ ಬುದ್ಧಿ |
| ಪಟ್ಟೆ | ೯೫- ೩ | ರೇಷ್ಮೆ |
| ಪಡಗು | ೧೯೯-೧೦ | ಹಡಗು |
| ಪಡಲಿಗೆ | ೫೬-೨೨ | ಪಟಲಕ (ಸಂ) |
| ಪಡೆವಳ್ಳ | ೨೪೪- ೮ | ಸೈನ್ಯಾಧಿಪತಿ |
| ಪಣ್ಣೆ ಪಣ್ಣೆ | ೧೨೯-೫೨ | ಸುಂದರವಾಗಿ ಸಜ್ಜುಗೊಂಡು |
| ಪದುಳ | ೪-೧೯ | ಸುಖ |
| ಪದೆದು | ೬೯- ೨ | ಪ್ರೀತಿಸಿ |
| ಪನ್ನಗ | ೩೫೮-೨೪ | ಹಾವು |
| ಪನ್ನಂಗೆ | ೨೦೩-೩೨ | ರಥದಲ್ಲಿ ಛತ್ರಿಯಂತಿರುವ ಭಾಗ |
| ಪರಿಸ್ಪಂದ | ೩೯೭-೩೫ | ನಡುಗುವಿಕೆ |
| ಪರ್ವುಗೆ | ೪೦೮-೫೫ | ಹಬ್ಬುಗೆ |
| ಪರೆರು | ೨೪೫-೧೭ | ಅನುಕರಣ ಶಬ್ದ |
| ಪಲುಂಬು | ೪೦೭-೪೯ | ಹಲುಬು, ಗೋಳಿಡು |
| ಪಲ್ಲವ | ೧೭೯-೨೯ | ಚಿಗುರು |
| ಪವನಾಭ್ಯಾಸ | ೧೩೦-೫೬ | ಯೋಗಾಭ್ಯಾಸ |
| ಪವಿ | ೨೬೯-೩೩ | ವಜ್ರಾಯುಧ |

| | | |
|---|---|---|
| ಪಸರ | ೩೫೪. ೩ | ಅಂಗಡಿ |
| ಪಸೆ | ೨೫೭- ೭ | ಹಸೆ |
| ಪಳಮಂಜರಿ | ೨೮೯- ೫ | ಒಂದು ರಾಗ |
| ಪಳುಕು | ೧೫-೩೧ | ಸ್ಫಟಿಕಾ |
| ಪಳಂಚು | ೧೨೪-೧೮ | ಮುಟ್ಟು |
| ಪಾಗುಡ | ೨೭೪-೧೫ | ಪ್ರಾಭೃತ (ತ್ಸ) ಕಾಣಿಕೆ |
| ಪಾಟ | ೮೧- ೬ | ಸಮಾನ |
| ಪಾಟಸು | ೩೫೭-೨೩ | ವಿಸ್ತರಿಸು |
| ಪಾತ್ರಸತಿ | ೧೩೩- ೪ | ವೇಶ್ಯೆ, ನರ್ತಕಿ |
| ಪಾಯ್ದಳ | ೧೯೩- ೩ | ಮೇಲೆಬೀಳುವ ಸೈನ್ಯ |
| ಪಾರಣೆ | ೧೭೪-೭೨ | ಉಪವಾಸದ ಮರುದಿನ |
| ಪಾರಿವ | ೩೨೩-೧೮ | ಪಾರಿವಾಳ |
| ಪಾಲ | ೨೬೪- ೫ | ಸೇತುವೆ |
| ಪಾಸಟ | ೧೭೨-೬೪ | ಸಮಾನ |
| ಪಾಸರೆ | ೨೪೫-೧೫ | ಹಾಸುಬಂಡೆ |
| ಪಿಸುಣ | ೨೦೩-೩೨ | ಚಾಡಿಕೋರ |
| ಪೀನ | ೨೩೧-೩೮ | ದೊಡ್ಡ |
| ಪುರೆಯಿಡು | ೨೩೧-೩೯<br>೩೯೩- ೯ | ಮೊರೆಯಿಡು, ವ್ಯಥೆಯಿಂದ ಕೂಗಿಕೊಳ್ಳು |
| ಪುದಿ | ೫-೨೭ | ಹುದುಗಿಕೊ |
| ಪುದುವಾಳ್ | ೧೮೪-೫೬ | ಜೊತೆಗೂಡಿ ರಾಜ್ಯಭಾರಮಾಡು |
| ಪೂದುರುಬಿ | ೧೦೦-೩೫ | ಹೂಮುಡಿದ ಹೆಣ್ಣು |
| ಪೂಸರಲ | ೨೯೩-೧೧ | ಮನ್ಮಥ |
| ಪೆಟಲು | ೧೯೪- ೯ | ವಿನೋದಕೇಳಿಯ ಬಂದೂಕದಂತ ಸಾಮುಗ್ರಿ |
| ಪೆಂಡೆಯ | ೪-೨೦ | ಕಾಲಿನಲ್ಲಿ ಧರಿಸುವ ಬಿರುದಿನ ಬಾವುಲಿ |

| | | |
|---|---|---|
| ಪೇತು | ೨೦೨-೨೫ | ಮನೋವಿಕಾರ (ಪ್ರೇತ) |
| ಪ್ರೈಸರ | ೨೪-೩೯<br>೩೬೦-೩೯ | ಜಾರಿಕೆ |
| ಪೊಚ್ಚರಿಸು | ೨೪೫.೧೫ | ಒಡೆ, ತುಂಡಾಗು |
| ಪೊನ್ನಂದಣ | ೨೦೦-೧೫ | ಚಿನ್ನದ ಪಲ್ಲಕ್ಕಿ |
| ಪೊರಪು | ೧೧೩- ೬ | ಹೊರಡುವಿಕೆ |
| ಪೊಳಲು | ೧೮೯-೧೭ | ಪಟ್ಟಣ |
| **ಪಂಚವಿಂಶತಿ** | ೩೫೮-೨೭ | ಇಪ್ಪತ್ತೈದು |
| ಪಿಂಜರಿತ | ೩೦೪-೨೧ | ದಟ್ಟವಾಗಿ ಕೆಂಬಣ್ಣದಿಂದ ತುಂಬಿದ |
| ಪುಂಖಾನು ಪುಂಖ | ೧೦೬-೧೨ | ಒಂದಾದ ಮೇಲೊಂದು |
| ಪುಂಡರೀಕ | ೧೬-೩೯ | ಹುಲಿ, ಶ್ರೇಷ್ಠ |
| ಪೊಂದುಡುಗೆ | ೨೮೭-೨೧ | ಬಂಗಾರದ ಉಡುಗೆ |
| ಪ್ರಗುಣ | ೩೯೪-೧೪ | ಶ್ರೇಷ್ಠವಾದ ಗುಣ |
| ಪ್ರಣುತ | ೧೨೯-೫೧ | ನಮಸ್ಕರಿಸಿದ |
| ಪ್ರಮುದ | ೩೦೧- ೪ | ಹೆಚ್ಚುಸಂತೋಷ |
| ಪ್ರಸ್ತುತಾರ್ಚನೆ | ೩೯೭-೩೨ | ಸಮಯಕ್ಕೆ ತಕ್ಕ ಪೂಜೆ |
| ಪ್ರಸ್ಥಾನ | ೧೯೭-೨೯ | ಪ್ರಯಾಣ |
| ಪ್ರಾಜ್ಯ | ೨೯೭-೩೯ | ಮಹತ್ತಾದ |
| ಪ್ರೇರಣಿಸು | ೩೨೯-೧೭ | ಪ್ರೇರಿಸು, ಮಾಡುವಂತೆ ಹೇಳು |
| ಪ್ರಾಂಶು | ೨೪೩- ೪ | ಕಿರಣ |

## ಫ

| | | |
|---|---|---|
| ಫಣಿ | ೪೩೦-೧೭ | ಹಾವು |
| ಫಣಿಪ | ೪೩೧-೧೮ | ಹಾವುಗಳ ಒಡೆಯ, ಆದಿಶೇಷ |
| ಫುಲ್ಲ | ೩೧೩- ೭ | ಹೂವು |

## ಬ

| | | |
|---|---|---|
| ಬಜಾವಣೆ | ೬-೩೩ | ವಾದ್ಯವನ್ನು ಬಾರಿಸುವುದು |

| | | |
|---|---|---|
| ಬಟ್ಟವರೆ | ೧೫೩- ೪ | ದುಂಡಾದ ಚಂದ್ರ |
| ಬಟ್ಟೆ | ೮೦- ೪ | ದಾರಿ |
| ಬಡಬಡಿಸು | ೨೫೨-೨೦ | ಸಿಕ್ಕಿದಂತೆ ಹರಟು |
| ಬಡಿಗೆ | ೨೬೭-೧೯ | ಕೋಲು |
| ಬಣ್ಣಗಾರಿಕೆ | ೧೩೬-೨೦ | ಜಾಣತನ |
| ಬದೆಗ | ೩೫೮-೨೫<br>೯೬-೧೧ | ಕೀಳು ಮನುಷ್ಯ |
| ಬನ್ನ | ೧೮೪-೫೬ | ಕಷ್ಟ, ಭಂಗ |
| ಬಯಲು ಮಾಡು | ೧೫೧-೪೧ | ಪ್ರತ್ಯಕ್ಷವಾಗಿ ತೋರಿಸು |
| ಬಲಗೊಳ್ | ೨೩-೩೩ | ಪ್ರದಕ್ಷಿಣೆ ಮಾಡು |
| ಬಲಿ | ೧೮೪-೫೭ | ಪೂಜೆ |
| ಬಲಿಪು | ೯೯-೨೪ | ಬಲವಂತವಾಗಿ |
| ಬಲ್ಗಡಣೆ | ೨೦೪-೪೦ | ದೊಡ್ಡ ಗುಂಪು |
| ಬಲ್ಲಾರಿಕೆ | ೧೭೬- ೮ | ಶಕ್ತಿ |
| ಬಲ್ದಿರವು | ೨೩೩- ೫ | ಹೆಚ್ಚು ಅವಕಾಶ |
| ಬಲ್ಲವಿಕೆ | ೨೬೧-೧೧ | ಜ್ಞಾನ |
| ಬಲ್ಲಿತು | ೭೧-೧೪ | ದೊಡ್ಡದು |
| ಬಲ್ವಿಡಿ | ೨೯೬-೨೪ | ಬಲವಾಗಿ ಹಿಡಿ |
| ಬವರ | ೩೫೫- ೮ | ಯುದ್ಧ |
| ಬವರಿ | ೫೯-೩೬ | ಭ್ರಮರ (ತ್ಸ) ದುಂಬಿ |
| ಬಸವಳಿ | ೩೩೭- ೮ | ಶಕ್ತಿಗುಂದು |
| ಬಳ್ಳ | ೭-೩೬ | ಅಳತೆಯ ಸಾಧನೆ |
| ಬಾಕುಳಿ | ೯೨-೭೭ | ಅತಿ ಆಸೆ |
| ಬಾದಣ | ೧೧೦-೩೭ | ಗವಾಕ್ಷಿ |
| ಬಾಯುಳಿ | ೪೦೭-೫೨ | ಶಕ್ತಿಗುಂದು |
| ಬಾಯ್ದೆರೆ | ೧೦೫-೧೦ | ತುಟಿ |
| ಬಾಲಾರ್ಕ | ೧೭೫- ೫ | ಬಾಲಸೂರ್ಯ |

| | | |
|---|---|---|
| ಬಿಣ್ಣಿತು | ೩೧೯-೪೩ | ದೊಡ್ಡದು |
| ಬಿತ್ತಗ | ೧೩೭-೩೦ | ಜಾಣ |
| ಬಿನ್ನಣಿಸು | ೯೬- ೯ | ಜಾಣತನದಿಂದ ವರ್ಣಿಸು |
| ಬಿರುಬು | ೨೩೩- ೫ | ಆವೇಶ |
| ಬಿರ್ವಾಗಿ | ೪೦೮-೫೫ | ವಿಶೇಷವಾಗಿ |
| ಬುದ್ಧ | ೩೮೮- ೫ | ಜ್ಞಾನಿ |
| ಬೆಕ್ಕಸ | ೬೭-೨೭ | ಆಶ್ಚರ್ಯ |
| ಬೆಟ್ಟಂತೆ | ೮೮-೪೮ | ಬೆಸುಗೆ ಹಾಕಿದಂತೆ |
| ಬೆಟ್ಟಿಮಾಡದೆ | ೩೪೧-೩೩ | ಲಕ್ಷ್ಯ ಮಾಡದೆ |
| ಬೆರೆತುಕೊಳೆ | ೨೨೬- ೭ | ಗರ್ವಿಸು |
| ಬೆಲೆವೆಣ್ಣು | ೧೯೦-೪೫ | ವೇಶ್ಯೆ |
| ಬೆಸೆದವರು | ೨೦೩-೩೪ | ಕೆಲಸಗಾರರು, ಸೇವಕರು |
| ಬೆಸಗೊಳ್ | ೬೬-೧೯ | ಪ್ರಾರ್ಥಿಸು |
| ಬೆಸನ | ೨೬೯-೩೦ | ಕಾರ್ಯ |
| ಬೆಸಲಾದಳು | ೨೨೨-೪೧ | ಹೆತ್ತಳು |
| ಬೆಳ್ಪಾಗು | ೩೮೪-೧೬<br>೯೦-೬೪ | ಬೆಪ್ಪಾಗು |
| ಬೆಳ್ವೆಟ್ಟ | ೩೦೮-೧೨ | ಬೆಳ್ಳಿಯ ಬೆಟ್ಟ |
| ಬೆಳ್ಳೆಲೆ | ೧೦೨-೪೫ | ಬಿಳಿದಾದ ಎಲೆ |
| ಬೇಳುವೆ | ೯೦-೬೪ | ಮಂಕುಗೊಳಿಸುವ ಶಕ್ತಿ |
| ಬೋಳೈಸು | ೪೧೩-೨೬ | ಸಮಾಧಾನ ಮಾಡು, ಮುದ್ದಿಸು |
| ಬಂಟಮಾನಸ | ೨೯೩- ೯ | ದೂತ |
| ಬಂಬಳಿ | ೪೦೭-೪೯ | ಆಯಾಸ |
| ಬಾಂಬಟ್ಟೆ | ೨೪೬-೨೧ | ಆಕಾಶಮಾರ್ಗ |
| ಬಿಂಗ | ೫೯-೪೧ | ಬಂಗಾರ |
| ಬೆಂಚೆ | ೩೬೮-೨೪ | ಸಣ್ಣ ಸರೋವರ |

## ಭ

ಭಟ ೨೨೧-೩೧ ಹೊಗಳುಭಟ್ಟ
ಭದ್ರ ೧೯೦-೧೯ ಮಂಗಳ
ಭರತ ೭-೩೮ ಅಲೆಯ ಶಬ್ದ
ಭರ್ತೃ ೧೧೯-೪೭ ಸ್ವಾಮಿ
ಭವನಕೃತ್ಯ ೮೭-೪೫ ಮನೆಕೆಲಸ
ಭವಮಾಲೆ ೪೦೩-೨೩ ಜನ್ಮಾಂತರಗಳು
ಭವ್ಯಗಣ ೪೧೨-೨೦ ಶ್ರೇಷ್ಠರ ಸಮೂಹ
ಭಾನು ೪-೧೯ ಸೂರ್ಯ
ಭಿತ್ತಿ ೩೨೨-೧೫ ಗೋಡೆ
ಭಿನ್ನಕುಂತಳ ೧೦೦-೩೪ ಬೈತಲೆ
ಭುಕ್ತಿ ೭೫-೩೬ ಊಟ
ಭೂಚಕ್ರ ೩೨೪-೨೮ ಜಗತ್ತು, ಭೂಮಿ
ಭೂಧವ ೧೪೨-೫೭ ರಾಜ
ಭೂಭಾಗೇಂದ್ರ ೧೩೫-೧೬ ಭೂದೇವೇಂದ್ರ, ರಾಜ
ಭೂರಿ ೧೭೯-೨೮ ದೊಡ್ಡ
ಭೂವರಾವಳಿ ೨೪೮- ೭ ರಾಜ ಸಮೂಹ
ಭಂಗುರ ೩೬೪- ೮ ಕ್ಷಣಿಕವಾದ
ಭಂಜಿತ ೩೦೪-೨೧ ಸೋಲಿಸಲ್ಪಟ್ಟ
ಭಂಡು ೮೯-೫೯ ಗೇಲಿ
ಭೃಂಗ ೩೪೮-೧೪ ದುಂಬಿ

## ಮ

ಮಕರಾಂಕ ೧೨೨- ೯ ಮೊಸಳೆಯ ಗುರುತುಳ್ಳವನು, ಮನ್ಮಥ
ಮಕುಟವರ್ಧನ ೪೨೦- ೨ ರಾಜ
ಮಜ್ಜನ ೧೫೩- ೧ ಸ್ನಾನ
ಮಡ ೧೧೭-೩೦ ಹಿಮ್ಮಡಿ

| | | |
|---|---|---|
| ಮಡಿ | ೨೦೯-೨೦ | ಬಗ್ಗಿಸು |
| ಮತಂಗರಿಪು | ೩೦೪-೨೦ | ಆನೆಯ ಶತ್ರು—ಸಿಂಹ |
| ಮದಾಳಿ | ೩೬೯-೩೮ | ಮದಿಸಿದ ದುಂಬಿಗಳು |
| ಮತ್ತೇಭ | ೪೨೫-೨೭ | ಮದಿಸಿದ ಆನೆ |
| ಮದಧಾರೆ | ೨೮೧-೧೭ | ಆನೆಯು ಮದಿಸಿದಾಗ ಪ್ರವಹಿಸುವ ರಸ |
| ಮದವಕ್ಕಳು | ೨೯೭-೩೫ | ಮದುವೆಯಾಗುವ ಮಕ್ಕಳು |
| ಮದಿಲು | ೪೨೬-೩೨ | ಕೋಟೆಯ ಗೋಡೆ |
| ಮಧುಮಾಸ | ೨೮೨-೨೩ | ವಸಂತಮಾಸ |
| ಮಧುವ್ರತ | ೧೦- ೩ | ದುಂಬಿ |
| ಮಯೂಖ | ೧೨೩-೧೨ | ಕಿರಣ |
| ಮಲಯಜ | ೮೧- ೮ | ಶ್ರೀಗಂಧ |
| ಮಲಹರಿ | ೧೫೪- ೯ | ಸಂಗೀತದಲ್ಲಿ ಒಂದು ರಾಗ |
| ಮಲ್ಲಿಕಾ | ೪೬-೩೫ | ಮಲ್ಲಿಗೆ |
| ಮಲ್ಲಿಗೆಗೋಲ | ೩೨೮- ೮ | ಮನ್ಮಥ |
| ಮಸ್ತಕ | ೧೪೦-೪೫ | ತಲೆ |
| ಮಾಗಾಯಿ | ೨೧೭- ೮ | ಮಾವಿನಕಾಯಿ ಆಕಾರದ ಒಡವೆ |
| ಮಾಡ | ೨೦೫-೪೫ | ಉಪ್ಪರಿಗೆ |
| ಮಾತುಗುಟ್ಟು | ೩೪೦-೨೪ | ಹರಟೆ ಹೊಡಿ |
| ಮಾತುಳ | ೨೪೮-೧೧ | ಸೋದರಮಾವ, ತಾಯಿಯ ಸೋದರ |
| ಮಾರಾಂಕದಲ್ಲಣ | ೨೫೮-೧೭ | ಎದುರಾಳಿಯನ್ನು ನಡುಗಿಸುವವನು |
| ಮಾರ್ಕೊಂಡು | ೧೬-೩೭ | ಇದಿರಾಗಿ |
| ಮಾರ್ತಾಂಡ | ೧೭೫- ೫ | ಸೂರ್ಯ |
| ಮಾಸಾಳು | ೨೨೭-೧೬ | ತಿಂಗಳು ಸಂಬಳದ ಸೇವಕ |
| ಮಿಸುನಿ | ೩೪೧-೩೪ | ಬಂಗಾರ |
| ಮಿಾಟಾಗಿ | ೨೪೦-೨೮ | ಅತಿಶಯವಾಗಿ |

ಮೀನಾಂಕ ೩೨೦- ೫ ಮನ್ಮಥ

ಮುಕ್ಕಡೆಯೊಡೆಯ ೨೨೦- ೨ ಮೂರು ಕೊಡೆಗಳ ನಡುವೆ ಪ್ರಕಾಶಿಸುವವನು, ತೀರ್ಥಂಕರ

ಮುಕ್ತಾಂಶು ೩೦೪-೧೯ ಮುತ್ತಿನ ಕಾಂತಿ

ಮುಗುಳಂಬ ೩೧೨- ೩ ಮನ್ಮಥ

ಮುದ್ರಿಕೆ ೨೯೦- ೯ ಉಂಗುರ

ಮೂಗವಡು ೩೩೫-೫೦ ಮೂಕನಾಗು

ಮೂಡೆ ೨೧೬- ೩ ಒರಗು ದಿಂಬು

ಮೃದುಲ ೩೫೫- ೭ ಮೃದುವಾದ

ಮೆರಹು ೫೯-೩೫ ಕಾಂತಿ

ಮೇಲ್ಗವಿ ೩೧೪-೧೬ ಮೇಲೆ ನುಗ್ಗು

ಮೈಗೊಡು ೨೩-೩೧ ನಮಸ್ಕರಿಸು

ಮೊಗ್ಗೆಗೋಲ ೩೨೨-೧೬ ಮನ್ಮಥ

ಮೊನೆದೋರು ೨೫೯- ೨ ಯುದ್ಧಮಾಡು

ಮೋಡಿ ೨- ೯ ಜಾಣತನ

ಮೋಹರ ೨೨೦-೨೪ ಸೈನ್ಯ

ಮೌಕ್ತಿಕ ೨೩೦-೩೩ ಮುತ್ತು

ಮಂಗಲಯಾನ ೨೮೮-೨೮ ಶುಭಪ್ರಯಾಣ, ಮಂಗಳ ವಾಹನ

ಮಂಗಳಾಸನ ೩೯೫-೨೦ ಸಿಂಹಾಸನ

ಮಂಚಿದಿ ೧- ೪ ಒಳ್ಳೆಯುದು

ಮಂಡಿತ ೪೧- ೫ ಅಲಂಕರಿಸಿದ

ಮಾಂದಳಿರು ೧೫೮-೩೧ ಮಾವಿನ ಚಿಗುರು

ಮಿಂಟೆ ೩೪೯-೨೩ ಆಯುಧ ವಿಶೇಷ

ಮಿಂಬುಳು ೪೭-೩೭ ಮಿಣುಕು ಹುಳು

ಮುಂಡಾಡು ೧೦೮-೨೫ ಮುದ್ದಾಡು

ಮುಂಡಾಸು ೧೨೨- ೮ ತಲೆಗೆ ಸುತ್ತುವ ರುಮಾಲು

ಮುಂಬಗಲು ೨೯೨- ೫ ಬೆಳಗ್ಗೆ

ಮುಂಬಟ್ಟೆ ೩೩೦-೨೨ ಮುಂದಿನ ಹಾದಿ

## ರ

| | | |
|---|---|---|
| ರುಯ್ಯ | ೧- ೪ | ಮನೋಹರ |
| ರವ | ೧೨೨- ೭ | ಶಬ್ದ |
| ರಾಗ | ೨೭-೫೯ | ಪ್ರೀತಿ |
| ರಾಜಮಾರ್ತಾಂಡ | ೨೩೩- ೧ | ರಾಜರಲ್ಲಿ ಸೂರ್ಯ ಸಮಾನ |
| ರಾಜಿ | ೨೪೬-೨೩ | ಶ್ರೇಣಿ |
| ರಾಯಸ | ೪೦೯- ೫ | ಓಲೆ |
| ರಾಯಸದಂಬು | ೨೧೫-೫೪ | ಓಲೆಯನ್ನು ಕೊಂಡೊಯ್ಯುವ ಬಾಣ |
| ರುಜೆ | ೨೪೧-೩೨ | ರೋಗ |
| ರೂಹಿಸು | ೬೦-೪೨ | ರೂಢಿಸು |
| ರಿಂಚೆಯ | ೧೫೫-೨೦ | ವಾದ್ಯ ವಿಶೇಷ |

## ಲ

| | | |
|---|---|---|
| ಲಗ್ಗೆ | ೧೯೪- ೯ | ಮುತ್ತಿಗೆ |
| ಲಹರಿ | ೨೬೩-೨೩ | ಪ್ರವಾಹ |
| ಲಾಗು | ೧೩೫-೧೬ | ಚಮತ್ಕಾರ |
| ಲಾಲಿತ | ೯೫- ೧ | ಆಟವಾಡಿಸಲ್ಪಟ್ಟ |
| ಲಾಸಿಕೆ | ೧೩೪-೧೦ | ಕುಣಿತ |
| ಲುಳಿ | ೪೦೫-೩೬ | ಆಭರಣ ವಿಶೇಷ, ಕಾಲುರುಳಿ |
| ಲೋಗರು | ೨೯೧- ೧ | ಸಾಮಾನ್ಯ ಮನುಷ್ಯರು |
| ಲೌಡಿ | ೧೮೫-೬೩ | ಲಗುಡಾ, ಆಯುಧವಿಶೇಷ |

## ವ

| | | |
|---|---|---|
| ವಕ್ರ | ೨೩೦-೩೪ | ಅಡ್ಡದಾರಿ ಹಿಡಿಯುವವ |
| ವಜ್ರಿ | ೪೩೩-೧೧ | ಇಂದ್ರ |
| ವರ್ಣಕ | ೨- ೬ | ಷಟ್ಪದಿ, ಸಾಂಗತ್ಯ ಇತ್ಯಾದಿ ದೇಶೀ ಕಾವ್ಯಗಳು |

| | | |
|---|---|---|
| ವನಜಗಂಧಿನಿ | ೨೫೩-೩೯ | ಕಮಲದಂತೆ ಸುವಾಸನಾಯುಕ್ತಳು |
| ವನಧಿ | ೧೭೬- ೯ | ಸಮುದ್ರ |
| ವರೇಣ್ಯ | ೪೨೦-೧೪ | ಶ್ರೇಷ್ಠ |
| ವಲಯ | ೪೨೪-೧೮ | ಭಾಗ |
| ವಸುಮತಿ | ೨೬೫-೧೧ | ಭೂಮಿ |
| ವಸ್ತುಕ | ೨- ೬ | ಚಂಪೂ, ಕಾವ್ಯ |
| ವಾಗ್ಜಾಲ | ೬೫-೧೨ | ಮಾತುಗಳ ಸಮೂಹ |
| ವಾಜಿ | ೨೦೯-೧೯ | ಕುದುರೆ |
| ವಾಗ್ಮಧುರ | ೨೧೯-೨೨ | ಮಾತಿನ ಸವಿ |
| ವಾರಣ ಗಮನ | ೨೫೬- ೫ | ಆನೆಯ ನಡಿಗೆ |
| ವಾರಣ ವೈರಿ | ೧೭೭-೧೭ | ಆನೆಯ ವೈರಿ, ಸಿಂಹ |
| ವಾರಿಜ | ೧೭೦-೪೯ | ಕಮಲ |
| ವಾರ್ಧಿತಟ | ೨೧೪-೫೦ | ಸಮುದ್ರದ ದಡ |
| ವಾಹಿನಿ | ೨೭೫-೨೦ | ಸೈನ್ಯ |
| ವಿಕಳ | ೨- ೬ | ಮತಿಗೆಟ್ಟ |
| ವಿಕ್ರಾಂತಲಗ್ನ | ೧೮೬-೬೬ | ಸಿಂಹಲಗ್ನ |
| ವಿಗುರ್ವಣೆ | ೨೯೫-೧೦ | ಗೆಲ್ಲಲು ಅಸಾಧ್ಯ |
| ವಿಜಿತ | ೩೮೦-೨೮ | ಗೆದ್ದ |
| ವಿಡಾಯ | ೧೮- ೧ | ಶೌರ್ಯ |
| ವಿತ್ತ | ೨೨೯-೨೭ | ಹಣ |
| ವಿದ್ಧಿ | ೧೯೫-೧೬ | ಶಿಲ್ಪಿ |
| ವಿನ್ಯಾಸ | ೨೮೯- ೪ | ಹೊಂದಿಕೆ |
| ವಿಪ್ರ | ೨೯೨- ೨ | ಬ್ರಾಹ್ಮಣ |
| ವಿಭಾಡ | ೧೮೭- ೨ | ಭಂಗಿಸುವವನು |
| ವಿಭ್ರಾಜಿತ | ೧೨೭-೩೬ | ಹೊಳೆವ |
| ವಿಭು | ೩-೧೬ | ಸ್ವಾಮಿ |
| ವಿಷ | ೨೬೭-೨೦ | ನೀರು |

| | | |
|---|---|---|
| ವಿಷ್ಟರಾಧ್ಯ | ೩೦೪-೨೦ | ಸಿಂಹಾಸನವನ್ನು ಅಲಂಕರಿಸುವವನು |
| ವಿಸರ | ೨೭೭-೫೯ | ಸಮೂಹ |
| ವಿಹಗ (ವಿಹಂಗ) | ೬೦-೪೮ | ಪಕ್ಷಿ |
| ವೀಟಿಕಾ | ೮೧- ೮ | ವೀಳೆಯ |
| ವೀತರಾಗ | ೧೧- ೬ | ಆಶೆ ನೀಗಿದವನು |
| ವೃತ್ಯನುಮತ | ೧೮೮-೧೧ | ಅಭ್ಯಾಸಕ್ಕೆ ಯೋಗ್ಯವಾದ |
| ವೃಷ್ಟಿ | ೧೬೪-೧೨ | ಮಳೆ |
| ವೆಗ್ಗಳಿಸು | ೯೪-೮೪ | ಹೆಚ್ಚಾಗು |
| ವೆಟ್ಟಿತಟ್ಟಿ | ೯೩-೭೮ | ಹೆಚ್ಚು, ಕಡಿಮೆ |
| ವೇತ್ರಧಾರಿಣಿ | ೭೬-೪೭ | ಬೆತ್ತ ಹಿಡಿದವಳು |
| ವೇಧಿಸು | ೯೩-೮೨ | ಹೇಳು |
| ವೇದ್ಯ | ೯-೪೮ | ಗೊತ್ತಾದ |
| ವೈಶಿಕ | ೧೪೮-೨೨ | ವೇಶ್ಯೆಗೆ ಸಂಬಂಧಿಸಿದ |
| ವೈಹಾಳಿ | ೨೪೪- ೭ | ಕುದುರೆ ಸವಾರಿ |
| ವ್ಯಲೀಕ | ೨೫೮- ೪ | ಸುಳ್ಳು, ಮಾಡಬಾರದುದು |
| ವ್ಯಾಕುಲ | ೩೭೦-೪೫ | ವ್ಯಥೆ |
| ವ್ಯೋಮ | ೨೪-೩೯ | ಆಕಾಶ |
| ವೃಂದ | ೨೪೧-೩೨ | ಸಮೂಹ |
| ವ್ರಜ | ೨೪೬-೨೦ | ಸಮೂಹ |
| ವ್ರತಿಕೆ | ೧೬೫-೨೧ | ಜೈನ ಅಣುವ್ರತ ಸ್ವೀಕರಿಸಿದ ಹೆಣ್ಣು |

### ಶ

| | | |
|---|---|---|
| ಶರಧಿ (ಶರನಿಧಿ) | ೨೦೬- ೩ | ಸಮುದ್ರ |
| ಶಲಾಕೆ | ೪೩೭- ೨ | ಶ್ರೇಷ್ಠ |
| ಶಶಿಕಾಂತ | ೨೦೮- ೭ | ಚಂದ್ರಕಾಂತ ಶಿಲೆ |
| ಶಾಲಿ | ೫-೨೮ | ಬಟ್ಟೆ |
| ಶಿಖರಿ | ೩೯೪-೧೩ | ಶಿಖರವುಳ್ಳದ್ದು, ಪರ್ವತ |

| | | |
|---|---|---|
| ಶೀತಾಂಶು | ೩೯೦-೧೭ | ತಂಪು ಕಿರಣಗಳುಳ್ಳವನು, ಚಂದ್ರ |
| ಶುಕಾವಳಿ | ೧೪೭-೧೨ | ಗಿಳಿಗಳ ಸಮೂಹ |
| ಶೇಷಾನ್ನ | ೩೨-೧೫ | ಊಟಮಾಡಿ ಉಳಿದ ಅನ್ನ |
| ಶೈಲ | ೨೪೪- ೭ | ಬೆಟ್ಟ |

### ಷ

| | | |
|---|---|---|
| ಷೋಡಶ | ೨೯೨- ೭ | ಹದಿನಾರು |

### ಸ

| | | |
|---|---|---|
| ಸಘಾಟಿಕೆ | ೪೮-೪೪ | ಧೈರ್ಯ, ಹಠಮಾರಿತನ |
| ಸಜ್ಜನಾರ್ಚಿತೆ | ೩೮೪-೧೩ | ಸಜ್ಜನರಿಂದ ಪೂಜಿಸಲ್ಪಡುವವಳು |
| ಸಟೆ | ೯೮-೫೧ | ಸುಳ್ಳು |
| ಸಡ್ಡಕ | ೩೪೮-೧೭ | ಹೆಂಡತಿಯ ಸೋದರಿಯ ಗಂಡ |
| ಸತ್ತಿಗೆ | ೩೨೧-೧೧ | ಛತ್ರಕಾ (ಸಂ), ಕೊಡೆ |
| ಸದನ | ೨೪-೪೦ | ಮನೆ |
| ಸದ್ಮ | ೧೫೦-೩೧ | ಮನೆ |
| ಸನಿಹ | ೪೩-೧೫ | ಹತ್ತಿರ |
| ಸಬಳ | ೧೮೫-೬೨ | ಕತ್ತಿ |
| ಸಬ್ಬವ | ೧೧೭-೩೫ | ಹಾಸ್ಯ, ಹುಡುಗಾಟ |
| ಸಭಾಮಸ | ೩೪೦-೨೭ | ಸಭಾಗೃಹ |
| ಸಯ್ಯಮ | ೩೮೦-೨೪ | ಮನೋನಿಗ್ರಹ |
| ಸಯ್ಯರಿದು | ೧೯೮- ೫ | ಉಚಿತವರಿತು |
| ಸರಲ | ೬೦-೬೩ | ಬಾಣ |
| ಸರಿಗೆ | ೧೨೩-೧೫ | ಜರತಾರಿ |
| ಸಲ್ಲಲಿತ | ೨೨೭-೧೨ | ಮನೋಹರ |
| ಸಲ್ಲೆಹ | ೧೮೫-೬೩ | ಆಯುಧ ವಿಶೇಷ, ಶಲ್ಯ (ತ್ಸ) |
| ಸಸಿನೆ | ೩೪೯-೨೨ | ಚೆನ್ನಾಗಿ |
| ಸಾಸಿನೆ | ೨೪೯-೨೨ | ಸಾಕು |

ಸಾಕೇತಪುರ ೧೯೮-೧ ಅಯೋಧ್ಯೆ
ಸಾಟಿ ೬೦-೪೨ ಸಮಾನ
ಸಾಮಜ ೧೯೪-೧೧ ಆನೆ
ಸಾಲಭಂಜಿಕೆ ೪೧-೪ ಪ್ರತಿಮೆ
ಸಿಬ್ಬದಿಗೊಳು ೩೨-೧೪ ಕಳವಳಗೊಳ್ಳು
ಸಿಹಿವಿಲ್ಲ ೩೩೮-೧೫ ಮನ್ಮಥ
ಸುಗಿ ೩೧೪-೧೬ ಎಳೆ
ಸುಗತ ನಿವಾಸ ೫೪-೧೦ ಜಿನ ದೇವಾಲಯ
ಸುತ್ರಾಮ ೧೬೩-೧೦ ಇಂದ್ರ
ಸುಧಾಂಗ ೩೪-೨೮ ಸುಣ್ಣ ಬಳಿದಿರುವುದು
ಸುಪ್ರಭೆ ೪೨೮-೪ ಒಳ್ಳೆಯ ಕಾಂತಿ
ಸುಮ್ಮಾನ ೮೯-೫೮ ಸಂತೋಷ
ಸುರಗುರು ೧೨೨-೧೧ ಬೃಹಸ್ಪತಿ
ಸುರಭಿ, ಸುರಪಶು ೬-೩೩ ಕಾಮಧೇನು
ಸುರವೇತ್ರಧಾರರು ೩೦೩-೧೫ ದೇವಲೋಕದ ಹೊಗಳುಭಟ್ಟರು
ಸುರಸೋಪತಿ ೫೨೦-೧೨ ದೇವತೆಗಳಿಗೆ ತಕ್ಕ ಉಪಚಾರ
ಸುವರ್ಣಾದಿ ೨೮೧-೧೬ ಮೇರು ಪರ್ವತ
ಸೂನು ೧೮೮-೭ ಮಗ
ಸೂಳೈಸು ೨೦೫-೧೮ ಶಬ್ದಮಾಡು
ಸೆಜ್ಜೆವನೆ ೧೪೫-೧ ಮಲಗುವ ಮನೆ
ಸೆಡೆ ೨೧೧-೩೧ ಹೆದರು
ಸೆಳೆವೆ ೧೨೨-೮ ಕೋಲು (?)
ಸೇತುಗಟ್ಟಾಗಿ ೨೬೮-೩ ಜೋಡಿಸು
ಸ್ತೈವೆರಗಾಗಿ ೧೯೧-೨೭ ಆಶ್ಚರ್ಯಗೊಂಡು
ಸೊನ್ನಾಹ ೨೧೨-೩೧ ಹೊಳಪು
ಸೋಟಗೆ ೩೫-೩೩ ಸೌಟು
ಸೊಪ್ಪು ಸೊಪ್ಪನೆ ೧೨೬-೩೪ ತಡೆದು ತಡೆದು

| | | |
|---|---|---|
| ಸೊಮ್ಮು | ೧೮೮-೧೦ | ಐಶ್ವರ್ಯ (ವಿವೇಕ ಜ್ಞಾನ) |
| ಸೂರಟ | ೩೮೨- ೧ | ಸೌರಾಷ್ಟ್ರ |
| ಸೋಹೆ | ೩೮೮- ೩ | ಜಾಡು, ಕ್ರಮ |
| ಸುರಭಾನಿಲ | ೩೨೨-೧೨ | ಸುವಾಸನೆಯುಗಾಳಿ |
| ಸಂಕ್ರಮ | ೬೬-೧೮ | ಸಮೂಹ |
| ಸಂಕ್ರಮಿಸು | ೫೪- ೭ | ಸೇರು |
| ಸಂಗ್ರಾಮ | ೨೭೨- ೩ | ಯುದ್ಧ |
| ಸಂಚಯಸಭೆ | ೨೩೭-೧೧ | ಒಟ್ಟು ಸೇರಿದ ಸಭೆ |
| ಸಂತಾನ ವಾಕ್ಯ | ೩೭೨-೫೫ | ಆಶೀರ್ವಚನ |
| ಸಾಂಬ್ರಾಣಿ | ೨೦೯-೧೮ | ಶ್ರೇಷ್ಠ ಕುದುರೆ, ಸುವಾಸನಾ ಸಾಮಾಗ್ರಿ |
| ಸಿಂಗಳ | ೮೫-೩೩ | ಸಿಂಹಳ |
| ಸಿಂಗಾಡಿ | ೨೬೯-೩೫ | ಬಿಲ್ಲು |
| ಸಿಂಧೂರ | ೨೯೬-೨೭ | ಆನೆ, ಕೆಂಪುಬಣ್ಣ |
| ಸ್ಮರಪುರ | ೩೨೭- ೪ | ಕೈಲಾಸ |
| ಸ್ಯಂದನ | ೨೦೦-೧೫ | ರಥ |
| ಸ್ವರ್ಗಸರಣಿ | ೩೨-೧೫ | ಸ್ವರ್ಗಕ್ಕೆ ಸಮಾನ |
| ಸ್ಪೃಹೆ | ೪೧೮- ೫ | ಆಸೆ |
| ಸ್ತೋಮ | ೨೨೪-೪೮ | ಗುಂಪು |

## ಹ

| | | |
|---|---|---|
| ಹಗರಣ | ೧೦೩-೫೨ | ಕ್ಷುಲ್ಲಕ ರಗಳೆ |
| ಹದನು | ೩೩೫-೫೦ | ವಿಚಾರ |
| ಹಮ್ಮೈಸು | ೩೮೬-೨೬ | ಮೈಮರೆ |
| ಹರಣ | ೧೪೮-೨೩ | ಪ್ರಾಣ |
| ಹರಿಗೆ | ೩೧೫-೧೮ | ಫಲಕಾ (ತ್ಸ), ಹಲಗೆ |
| ಹರುವ | ೨೦೨-೨೬ | ದಾರಿ, ರೀತಿ |

| | | |
|---|---|---|
| ಹರೆದುಪ್ಪ | ೧೫೯-೩೭ | ಹೆತ್ತ ತುಪ್ಪ |
| ಹವಣಿಸು | ೧೭೯-೧೧ | ಸಿದ್ಧಗೊಳಿಸು |
| ಹಳಹಳಚು | ೧೧೩- ೭ | ಫಳ, ಫಳ ಹೊಳೆ |
| ಹಾರು | ೨೦-೧೭ | ನಿರೀಕ್ಷಿಸು, ನೋಡು |
| ಹಾರುವ | ೬-೩೩ | ಬ್ರಾಹ್ಮಣ |
| ಹಾವುಗೆ | ೪-೨೦ | ಪಾದುಕ (ತ್ಸ) |
| ಹಿಕ್ಕು | ೨೬-೪೫ | ಬೆದಕು, ಹುಡುಕು |
| ಹೂಣಿದ | ೬೯- ೪ | ಹೊತ್ತ |
| ಹೂಣಿಸು | ೨೨೭-೧೭ | ಪ್ರತಿಜ್ಞೆ ಮಾಡಿಸು |
| ಹೆಗ್ಗಾರ | ೩೨೨-೧೭ | ಭರದ್ವಾಜಪಕ್ಷಿ |
| ಹೆದ್ದೊರೆ | ೨೯೮-೨೮ | ನದಿ |
| ಹೆಮ್ಮಗ | ೩೬೫-೧೮ | ಹಿರಿಯಮಗ |
| ಹೆರೆ | ೧೬೩- ೩ | ಪೆರೆ, ಚಂದ್ರ |
| ಹೇಮ | ೩-೧೩ | ಚಿನ್ನ |
| ಹೊಗರು | ೪೦೪-೩೪ | ಕಾಂತಿ |
| ಹೊತ್ತಗೆ | ೩೬-೨೧ | ಪುಸ್ತಕ |
| ಹೊನ್ನೊರೆ | ೪-೨೧ | ಬಂಗಾರದಿಂದ ಮಾಡಿದ ಕತ್ತಿಯ ಚೀಲ |